# ಮುನ್ನುಡಿ

ಗ್ರಿಮ್ ಸಹೋದರರ ಹತ್ತು ಕತೆಗಳನ್ನು ಕನ್ನಡಿಸಿ ಈ ಪುಸ್ತಕದಲ್ಲಿ ಕೊಟ್ಟಿದ್ದೇನೆ. ಇದುವರೆಗೂ ಮಾಡಿದಂತೆಯೇ ಈ ಕತೆಗಳಲ್ಲೂ ಅಗತ್ಯ ತೋರಿದಾಗಲೆಲ್ಲಾ ಎಷ್ಟೋ ಬದಲಾವಣೆಗಳನ್ನು ಮಾಡಲು ಹಿಂದೆಗೆದಿಲ್ಲ. ತಾವಾಗಿಯೇ ಓದಿಕೊಳ್ಳುವ ಹುಡುಗರಿಗೆ ಪ್ರತಿವಾಕ್ಯವೂ ಪ್ರತಿ ಘಟನೆಯೂ ಸುಲಭಗ್ರಾಹ್ಯವಾಗಿರಬೇಕೆಂದು ನನ್ನ ಉದ್ದೇಶ. ಅವಕಾಶ ಸಿಕ್ಕಾಗಲೆಲ್ಲಾ ಇಂಥ ಕತೆಗಳು ಇನ್ನೂ ನೂರಾರನ್ನು ಬರೆದು ಪ್ರಕಟಿಸಬೇಕೆಂದು ನನ್ನ ಆಶಯ.

ಬೆಂಗಳೂರು ನಗರ,
೩೧–೮–೧೯೫೩

**ಎಂ. ರಾಮರಾವ್**

# ಪರಿವಿಡಿ

# ವನಮಂದಿರ

ಮಲೆನಾಡಿನಲ್ಲಿ ಒಂದು ಊರು. ಅಲ್ಲೊಬ್ಬ ಮರ ಕಡಿಯುವವನಿದ್ದ. ಅವನಿಗೆ ಹೆಂಡತಿಯೂ ಮೂವರು ಹೆಣ್ಣುಮಕ್ಕಳೂ ಇದ್ದರು. ಅವನು ಪ್ರತಿ ದಿನವೂ ಕಾಡಿಗೆ ಹೋಗಿ ಸೌದೆ ಕಡಿದು ತಂದು ಮಾರಿ ಜೀವನ ನಡೆಸುತ್ತಿದ್ದ. ಅವರ ಮನೆಗೆ ಸ್ವಲ್ಪ ದೂರದ ಆಚೆಯೇ ಒಂದು ದೊಡ್ಡ ಅರಣ್ಯವಿತ್ತು.

ಒಂದು ದಿನ ಅವನು ಬೆಳಗ್ಗೆ ಹೊತ್ತಿಗೆ ಮುಂಚೆಯೇ ಎದ್ದು, ಬಂಡಿಗೆ ಎತ್ತುಗಳನ್ನು ಹೂಡಿ ಅಡವಿಗೆ ಹೋಗಲು ಸಿದ್ಧನಾದ. ಹೊರಡುವ ಮೊದಲು ಹೆಂಡತಿಯನ್ನು ಕೂಗಿ, "ಪೇಟೆಯ ಮಂಡಿಯೊಂದಕ್ಕೆ ಐದು ಗಾಡಿ ಸೌದೆ ಒದಗಿಸಲು ಒಪ್ಪಿಕೊಂಡಿದ್ದೇನೆ. ಆದುದರಿಂದ ಇನ್ನು ಎರಡು ಮೂರು ದಿನ ಬೆಳಗಿನಿಂದ ಸಂಜೆಯವರೆಗೂ ಬಿಡುವಿಲ್ಲದೆ ದುಡಿಯಬೇಕು. ಮಧ್ಯಾಹ್ನ ಮನೆಗೆ ಬಂದು ಹೋಗುವುದಕ್ಕೆ ಆಗುವುದಿಲ್ಲ. ಬಿಸಿ ಊಟವನ್ನು ನಮ್ಮ ಹಿರಿಯ ಹುಡುಗಿಯ ಕೈಯಲ್ಲಿ ಕಾಡಿಗೇ ಕೊಟ್ಟು ಕಳುಹಿಸಿಬಿಡು. ಅವಳಿಗೆ ನಾನಿರುವ ಸ್ಥಳ ಸುಲಭವಾಗಿ ಗೊತ್ತಾಗುವ ಹಾಗೆ ದಾರಿಯುದ್ದಕ್ಕೂ ಅಲ್ಲಲ್ಲಿ ಕಾಡು ಹೂಗಳನ್ನು ಚೆಲ್ಲಿಕೊಂಡು ಹೋಗಿರುತ್ತೇನೆ. ಅವನ್ನು ಗುರುತಿಟ್ಟು ಕೊಂಡು ಬಂದರೆ ಅವಳಿಗೆ ನನ್ನನ್ನು ಹುಡುಕುವುದು ಏನೂ ಕಷ್ಟವಾಗುವುದಿಲ್ಲ" ಎಂದು ಹೇಳಿದ.

ಅವನ ಹೆಂಡತಿ "ಹಾಗೆಯೇ ಆಗಲಿ" ಎಂದಳು.

ಮಧ್ಯಾಹ್ನವಾಯಿತು. ಸೂರ್ಯ ಆಕಾಶದಲ್ಲಿ ನೆತ್ತಿಯ ನೇರಕ್ಕೆ ಹತ್ತಿದ. ಸೌದೆಯವನ ಹೆಂಡತಿ ಗಂಡನ ಅಪ್ಪಣೆಯ ಪ್ರಕಾರ ಬುತ್ತಿಯನ್ನು ಕಟ್ಟಿ ಹಿರಿಯ ಮಗಳ ಕೈಯಲ್ಲಿ ಕೊಟ್ಟು ಕಳುಹಿಸಿದಳು.

ಹುಡುಗಿ ದಾರಿಯಲ್ಲಿ ಕಾಡು ಹೂಗಳು ಎಲ್ಲಾದರೂ ಕಂಡಾವೇನೋ ಎಂದು ನೆಲವನ್ನೇ ನೋಡುತ್ತ ನಡೆದಳು. ಆದರೆ ಅವಳು ಎಷ್ಟು ದೂರ

ಹೋದರೂ ಒಂದು ಹೂವಾದರೂ ಕಣ್ಣಿಗೆ ಬೀಳಲಿಲ್ಲ. ಏಕೆಂದರೆ, ಸೌದೆಯವನು ಆ ಕಡೆ ಹೂಗಳನ್ನು ಚೆಲ್ಲಿಕೊಂಡು ಮುಂದುವರಿದ ಸ್ವಲ್ಪ ಹೊತ್ತಿಗೆ ಈ ಕಡೆ ಒಂದು ದೊಡ್ಡ ಬಿರುಗಾಳಿ ಎದ್ದಿತು. ಅದರ ರಭಸಕ್ಕೆ ಸಿಕ್ಕಿ ಆ ಹೂವುಗಳೆಲ್ಲಾ ಕ್ಷಣಮಾತ್ರದಲ್ಲಿ ಮಾಯವಾದವು. ಕಾಡಿನ ಹೆಮ್ಮರಗಳನ್ನೇ ಅಲುಗಾಡಿಸುವ ಬಿರುಗಾಳಿ ಹೂಗಳನ್ನು ಬಿಡುವುದೇ? ಹೀಗಾಗಿ, ಅವಳಿಗೆ ತನ್ನ ತಂದೆ ಎಲ್ಲಿದ್ದನೆಂಬುದರ ಸುಳಿವು ಕೂಡ ಗೊತ್ತಾಗಲಿಲ್ಲ. ಅವಳು ಅರಣ್ಯದಲ್ಲಿ ಇತ್ತಿಂದತ್ತ ಅತ್ತಿಂದಿತ್ತ ಎಷ್ಟು ಅಲೆದಾಡಿದರೂ ಉಪಯೋಗವಾಗಲಿಲ್ಲ.

ಆದರೆ ಹೊತ್ತು ಅವಳಿಗಾಗಿ ನಿಲ್ಲುತ್ತದೆಯೆ? ಕ್ರಮೇಣ ಮಧ್ಯಾಹ್ನದ ಬಿಸಿಲು ಅಳಿದು ಮಬ್ಬು ಮೂಡಿತು. ಕಡೆಗೆ ಕಗ್ಗತ್ತಲು ಕಾಡನ್ನೆಲ್ಲಾ ಮುಸುಕಿತು. ಮೊದಲೇ ಭಯಂಕರವಾಗಿದ್ದ ಅಡವಿಯ ಮೌನ ಇನ್ನಷ್ಟು ಆಳವಾಯಿತು.

ಹುಡುಗಿಯ ಎದೆ ಡವಡವ ಬಡಿಯತೊಡಗಿತು. ಅವಳ ಕಣ್ಣಲ್ಲಿ ನೀರು ಉಕ್ಕಿತು. ಅವಳು ಇನ್ನೇನು ಗಟ್ಟಿಯಾಗಿ ಬಿಕ್ಕಿ ಬಿಕ್ಕಿ ಅಳುವುದರಲ್ಲಿದ್ದಳು.

ಅಷ್ಟರಲ್ಲಿ ನೂರಿನ್ನೂರು ಗಜದ ಆಚೆ ಮರಗಳ ನಡುವೆ ಒಂದು ದೀಪ ಕಾಣಿಸಿಕೊಂಡಿತು. ಅವಳಿಗೆ ಹೋದ ಜೀವ ಮರಳಿ ಬಂದಹಾಗಾಯಿತು. "ದೀಪ ಇದ್ದಕಡೆ ಜನ ಇದ್ದೇ ಇರಬೇಕು. ಅವರನ್ನು ಕೇಳಿಕೊಂಡರೆ ರಾತ್ರಿ ತಮ್ಮ ಮನೆಯಲ್ಲಿ ತಂಗಲು ಸ್ಥಳ ಕೊಟ್ಟಾರು" ಎಂದು ಯೋಚಿಸಿ ಅವಳು ದೀಪವಿದ್ದ ದಿಕ್ಕಿನಲ್ಲಿ ನಡೆದು ಒಂದು ಸಣ್ಣ ಮನೆಯ ಮುಂದಿನ ಅಂಗಳಕ್ಕೆ ಬಂದು ಬಾಗಿಲು ತಟ್ಟಿದಳು. ಆ ದೀಪ ಕಂಡುಬಂದಿದ್ದುದು ಆ ಮನೆಯ ಕಿಟಕಿಯ ಮೂಲಕ.

"ಒಳಕ್ಕೆ ಬಾ" ಎಂದು ಒಂದು ಧ್ವನಿ ಕೂಗಿತು.

ಅವಳು ಮುಂಬಾಗಿಲನ್ನು ನೂಕಿ ಮನೆಯನ್ನು ಹೊಕ್ಕಳು. ಹಜಾರದಲ್ಲಿ ಯಾರೂ ಇರಲಿಲ್ಲ. ಅದರ ಒಂದು ಪಕ್ಕದಲ್ಲಿ ಮುಚ್ಚಿದ್ದ ಬಾಗಿಲು ಇನ್ನೊಂದು ಇತ್ತು. ಅವಳು ಅದನ್ನೂ ತಟ್ಟಿದಳು.

"ಒಳಕ್ಕೆ ಬಾ" ಎಂದು ಅದೇ ಧ್ವನಿ ಮತ್ತೆ ಕೂಗಿತು.

ಅವಳು ಬಾಗಿಲನ್ನು ತೆಗೆದು ಒಳಗೆ ಹೆಜ್ಜೆಯಿಟ್ಟಳು. ಅದೊಂದು ಕೋಣೆ. ಅದರ ಒಂದು ಮೂಲೆಯಲ್ಲಿ ಉದ್ದವಾದ ಗಡ್ಡ ಮೀಸೆಗಳು ಬೆಳೆದಿದ್ದ ಮುದುಕನೊಬ್ಬನು ಬೆಂಕಿ ಕಾಯಿಸಿಕೊಳ್ಳುತ್ತ ತಲೆ ತಗ್ಗಿಸಿಕೊಂಡು ಕುಳಿತಿದ್ದನು. ಅವನ ಮುಖ ಚಿಂತೆಯಿಂದ ಮಂಕಾಗಿತ್ತು. ಅವನ ಕಣ್ಣುಗಳು ಯಾವುದೋ ವ್ಯಸನವನ್ನು ಸೂಚಿಸುತ್ತಿದ್ದವು. ಅವನಿಗೆ ಎದುರಾಗಿ ಒಂದು ಕೋಳಿಯೂ ಒಂದು ನಾಯಿಯೂ ಒಂದು ಹಸುವೂ ಮಲಗಿದ್ದವು. ಹುಡುಗಿ ತಾನು ಕಾಡಿಗೆ ಬಂದಿದ್ದುದಕ್ಕೆ ಕಾರಣವನ್ನು ಅವನಿಗೆ ತಿಳಿಸಿ, ಆ ರಾತ್ರಿಯ ಮಟ್ಟಿಗೆ ತನಗೆ ಮಲಗಲು ಎಡೆಕೊಡಬೇಕೆಂದು ಅವನನ್ನು ಬೇಡಿದಳು.

ಅವನು "ನನ್ನ ಮುದ್ದಿನ ಗೆಳೆಯರೆ, ಏನು ಹೇಳುತ್ತೀರಿ?" ಎಂದು ಆ ಪ್ರಾಣಿಗಳ ಕಡೆಗೆ ತಿರುಗಿ ಕೇಳಿದ.

ಅವು "ಓಹೋ" ಎಂದವು.

ಮುದುಕ "ಈ ಮನೆಯಲ್ಲಿ ಬೇಕಾದಷ್ಟು ಪಾತ್ರೆ ಪದಾರ್ಥಗಳಿವೆ. ಅಡಿಗೆ ಮನೆಗೆ ಹೋಗಿ ಒಲೆಯನ್ನು ಹೊತ್ತಿಸಿ ನಮಗೆ ಬಿಸಿಯೂಟವನ್ನು ತಯಾರಿಸು, ನೋಡೋಣ" ಎಂದ.

ಹುಡುಗಿ ಅಡಿಗೆಯ ಮನೆಗೆ ಹೋದಳು. ಅಲ್ಲಿ ರುಚಿಕರವಾದ ರಸಕವಳವನ್ನು ಇಳಿಸಲು ಅಗತ್ಯವಾದ ಎಲ್ಲ ವಸ್ತುಗಳೂ ಸಿದ್ಧವಾಗಿದ್ದವು. ಆದಕಾರಣ ಮುದುಕನು ತನಗೆ ವಹಿಸಿದ್ದ ಕೆಲಸವನ್ನು ಪೂರೈಸಲು ಅವಳಿಗೆ ಬಹಳ ಹೊತ್ತು ಹಿಡಿಯಲಿಲ್ಲ.

ಅವಳು ತಾನು ಮಾಡಿದ್ದ ಊಟದ ಪದಾರ್ಥಗಳನ್ನೆಲ್ಲಾ ಎರಡು ತಟ್ಟೆಗಳಲ್ಲಿಟ್ಟುಕೊಂಡು ಬಂದು, ಮುದುಕನ ಮುಂದೆ ಒಂದು ತಟ್ಟೆಯನ್ನಿಟ್ಟು ಇನ್ನೊಂದನ್ನು ತನ್ನ ಮುಂದಿಟ್ಟುಕೊಂಡು ಕುಳಿತಳು. ಅವನು ಇನ್ನೂ ಮೂರು ನಾಲ್ಕು ತುತ್ತು ತಿಂದಿದ್ದನೋ ಇಲ್ಲವೋ ಇವಳ ಊಟ ಆಗಲೇ ಮುಗಿದುಹೋಗಿತ್ತು. ಅಲ್ಲೇ ಉಪವಾಸ ಮಲಗಿದ್ದ ಪ್ರಾಣಿಗಳ ಕಡೆಗಂತೂ ಅವಳ ಗಮನವೇ ಹೋಗಲಿಲ್ಲ.

ಅನಂತರ ಅವಳು "ನನಗೆ ಕಾಡಿನಲ್ಲಿ ಸುತ್ತಿಸುತ್ತಿ ಬಹಳ ಆಯಾಸವಾಗಿದೆ. ಹಾಸಿಗೆ ಎಲ್ಲಿದೆ ಹೇಳಿ, ಮಲಗಿಬಿಡುತ್ತೇನೆ" ಎಂದಳು.

ಪ್ರಾಣಿಗಳು "ನೀನು ನಿನ್ನ ಹೊಟ್ಟೆಯ ಪಾಡನ್ನು ಮಾತ್ರ ನೋಡಿ ಕೊಂಡೆಯೋ ಹೊರತು ನಮ್ಮ ಯೋಚನೆಯೋ ನಿನಗೆ ಬರಲಿಲ್ಲ. ರಾತ್ರಿ ನಿನಗೆ ಏನಾಗುತ್ತದೆಯೋ ನೋಡುತ್ತಿರು" ಎಂದವು.

ಮುದುಕ "ಅಟ್ಟದ ಮೇಲಕ್ಕೆ ಹತ್ತಿಹೋಗು. ಅಲ್ಲಿ ಎರಡು ಹಾಸಿಗೆ ಸುರುಳಿಗಳಿವೆ. ಎರಡನ್ನೂ ಚೆನ್ನಾಗಿ ಕೊಡವಿ ಹಾಸು. ಒಂದು ನಿನಗೆ, ಒಂದು ನನಗೆ" ಎಂದ.

ಹುಡುಗಿ ಏಣಿಯನ್ನು ಹತ್ತಿ ಅಟ್ಟಕ್ಕೇರಿದಳು. ಅಲ್ಲಿ ಅವನು ಹೇಳಿದ್ದಂತೆಯೇ ಎರಡು ಹಾಸಿಗೆಗಳಿದ್ದವು. ಅವಳು ಅವುಗಳಲ್ಲಿ ಒಂದನ್ನು ಉರುಳಿಸಿ ಕೊಂಡು ಅದರ ಮೇಲೆ ತಾನೊಬ್ಬಳು ಮಲಗಿಯೇ ಬಿಟ್ಟಳು. ಮುದುಕನಿಗೂ ಒಂದು ಹಾಸಿಗೆಯನ್ನು ಹಾಸಿಕೊಡಬೇಕು, ಅವನು ಬರುವವರೆಗೂ ತಡೆಯ ಬೇಕು ಎಂಬ ಯೋಚನೆಯೇ ಅವಳಿಗೆ ಬರಲಿಲ್ಲ. ಅಷ್ಟೇಕೆ, ಅವಳಿಗೆ ಅವನ ನೆನಪು ಕೂಡ ಆಗಲಿಲ್ಲ.

ಆದರೇನು? ಇವಳು ಮರೆತರೆ ಅವನು ಮರೆಯಬೇಕಲ್ಲ! ಕೆಲವು ನಿಮಿಷ ಬಿಟ್ಟು ಅವನೂ ಮೇಲಕ್ಕೆ ಬಂದ. ಅಷ್ಟು ಹೊತ್ತಿಗೆ ಅವಳು ಗಾಢ ನಿದ್ರೆಯಲ್ಲಿ ಮುಳುಗಿ ಗೊರಕೆಹೊಡೆಯುತ್ತಿದ್ದಳು. ಅವಳನ್ನು ನೋಡಿ ಅವನು ಒಂದು ಸಾರಿ ತನ್ನ ತಲೆಯನ್ನು ಅಲ್ಲಾಡಿಸಿದ. ಹಾಗೆಯೇ ಅವಳು ಮಲಗಿದ್ದ ಹಾಸಿಗೆಯ ಕೆಳಗಿನ ನೆಲವನ್ನು ತನ್ನ ಪಾದದಿಂದ ಅಮುಕಿದ. ತಕ್ಷಣ ಅಲ್ಲಿದ್ದ ಒಂದು ಗುಪ್ತವಾದ ಬಾಗಿಲು ತೆರೆದುಕೊಂಡಿತು. ಅವಳು ಹಾಸಿಗೆ ಸಹಿತ ಕೆಳಕ್ಕೆ ಕುಸಿದು ಕತ್ತಲಲ್ಲಿ ಮಾಯವಾದಳು.

ಇತ್ತ ಅವಳ ತಂದೆ ಆ ದಿನ ರಾತ್ರಿ ಎಂದಿಗಿಂತಲೂ ಹೊತ್ತಾಗಿ ಮನೆಗೆ ಹಿಂದಿರುಗಿದ. ಹೆಂಡತಿಯನ್ನು ಕಂಡ ಕೂಡಲೆ ಅವನು "ಎಂಥ ಕೆಲಸ ಮಾಡಿದೆ! ನಿನ್ನನ್ನು ನಂಬಿಕೊಂಡು ಹಗಲೆಲ್ಲಾ ಹೊಟ್ಟೆಗಿಲ್ಲದೆ ಸೊರಗಬೇಕಾ ಯಿತು" ಎಂದು ಅವಳನ್ನು ನಿಂದಿಸಿದ.

ಅವಳು ನನ್ನದೇನು ತಪ್ಪು? ಹುಡುಗಿ ಸೂರ್ಯ ನೆತ್ತಿಯ ಮೇಲಕ್ಕೆ ಏರುವ ಮುಂಚೆಯೇ ಬುತ್ತಿಯನ್ನು ತೆಗೆದುಕೊಂಡು ಹೊರಟಳು. ಎಲ್ಲೋ ದಾರಿ ತಪ್ಪಿದಳೆಂದು ಕಾಣುತ್ತದೆ. ಅವಳು ಎಷ್ಟುಹೊತ್ತಾದರೂ ಬರಲಿಲ್ಲವಲ್ಲ

ಎಂದು ನಾನು ಸಂಕಟಪಡುತ್ತಿರುವಾಗ ನೀನು ನನ್ನನ್ನೇ ದೂಷಿಸುತ್ತೀಯಲ್ಲಾ! ಪಾಪ, ಮಗು ಎಲ್ಲಿದ್ದಾಳೋ, ಏನು ಗತಿಯೋ!" ಎಂದು ತಿರುಗಿಬಿದ್ದಳು.

ಸೌದೆಯವನು ತೆಪ್ಪಗಾದ.

ಮಾರನೆಯ ದಿನ ಅವನು ಪುತ್ತೆ ಬೆಳಗಿನ ಜಾವಕ್ಕೇ ಎದ್ದು ಆ ದಿವಸ ಎರಡನೆ ಮಗಳ ಕೈಯಲ್ಲಿ ಬುತ್ತಿಯನ್ನು ಕೊಟ್ಟು ಕಳುಹಿಸಬೇಕೆಂದು ಹೆಂಡತಿಗೆ ಹೇಳಿ ಕಾಡಿಗೆ ಹೊರಟ. ಹೋಗುವ ಮೊದಲು "ಇವತ್ತು ತರಗೆಲೆಗಳನ್ನು ದಾರಿಯುದ್ದಕ್ಕೂ ಹತ್ತಿರ ಹತ್ತಿರದಲ್ಲೇ ರಾಶಿ ಹಾಕಿ ಹೋಗುತ್ತೇನೆ. ಆ ರಾಶಿಗಳನ್ನು ಅನುಸರಿಸಿ ಬಂದರೆ ನಾನಿರುವ ಸ್ಥಳವನ್ನು ಸುಲಭವಾಗಿ ಪತ್ತೆಹಚ್ಚಬಹುದು. ಈ ಹುಡುಗಿಯೂ ಅವಳ ಅಕ್ಕನ ಹಾಗೆ ದಾರಿ ತಪ್ಪುತ್ತಾಳೆ ಎಂಬ ಹೆದರಿಕೆ ಇರುವುದಿಲ್ಲ" ಎಂದು ಒಕ್ಕಣಿಸಿದ.

ಮಧ್ಯಾಹ್ನದ ಹೊತ್ತಿಗೆ ಎರಡನೆಯ ಹುಡುಗಿ ಬುತ್ತಿಯೊಡನೆ ಹೊರಟಳು. ಆದರೆ ಅವಳು ಅರಣ್ಯವನ್ನು ಸೇರುವ ಹೊತ್ತಿಗೆ ದುರದೃಷ್ಟವಶದಿಂದ ಎಲ್ಲೋ ಒಂದು ಕಡೆ ಕಾಳ್ಗಿಚ್ಚು ಆರಂಭವಾಗಿತ್ತು. ಅದು ಕೆಲವು ನಿಮಿಷಗಳಲ್ಲೇ ಅವಳು ಹೋಗಬೇಕಾಗಿದ್ದ ಪ್ರದೇಶವನ್ನೆಲ್ಲಾ ಆವರಿಸಿತು. ಅಲ್ಲಿದ್ದ ಗಿಡ ಮರಗಳೆಲ್ಲಾ ಉರಿದುಬಿದ್ದವು. ಇನ್ನು ತರಗೆಲೆಗಳು ಉಳಿಯುವುವೆ? ಕಣ್ಣುಮುಚ್ಚಿ ತೆರೆಯುವಷ್ಟರಲ್ಲಿ ಅವು ಬೂದಿಯಾದವು. ಹುಡುಗಿ ಕಾಡಿಗೆ ಬಂದಾಗ ಅವಳು ಕಂಡುದು ಸುಟ್ಟು ಸೀಕರಿಸಿ ಕರಿಯ ದೆವ್ವಗಳ ಹಾಗೆ ನಿಂತಿದ್ದ ಗಿಡ ಮರಗಳನ್ನು ಮತ್ತು ನೂರಾರು ಗಜಗಳ ವಿಸ್ತಾರದಲ್ಲಿ ಹರಡಿಕೊಂಡಿದ್ದ ಬೆಚ್ಚನೆಯ ಬೂದಿಯನ್ನು. ತನ್ನ ತಂದೆ ಮರ ಕಡಿಯಲು ಇಲ್ಲಿಗೆ ಖಂಡಿತ ಬಂದಿರಲಾರನೆಂದು ಊಹಿಸಿ ಅವಳು ಬೇರೊಂದು ಕಡೆಗೆ ತಿರುಗಿ ಕಾಡನ್ನು ಹೊಕ್ಕಳು. ಅವಳೂ ದಾರಿ ತಪ್ಪಿದಳು. ಸಂಜೆಯವರೆಗೂ ಸುಮ್ಮನೆ ಸುತ್ತಿ ಸುತ್ತಿ ಕೊನೆಗೆ ಅವಳೂ ಹಿಂದಿನ ದಿನ ತನ್ನ ಅಕ್ಕ ಬಂದಿದ್ದ ಮನೆಗೇ ನಡೆದು ಬಾಗಿಲು ತಟ್ಟಿದಳು.

ಒಳಗಿದ್ದ ಮುದುಕ "ಬಾಗಿಲನ್ನು ನೂಕು" ಎಂದ.

ಅವಳು ಒಳಕ್ಕೆ ಕಾಲಿಟ್ಟು ಆ ರಾತ್ರಿ ಅಲ್ಲಿ ಮಲಗಲು ತನಗೆ ಅವಕಾಶ ಕೊಡಬೇಕೆಂದು ಅವನನ್ನು ಬೇಡಿದಳು.

ಅವನು ಹಿಂದಿನ ದಿನ ಮಾಡಿದ್ದಂತೆಯೇ, "ನನ್ನ ಮುದ್ದಿನ ಗೆಳೆಯರೆ, ಏನು ಹೇಳುತ್ತೀರಿ?" ಎಂದು ಅಲ್ಲಿದ್ದ ಪ್ರಾಣಿಗಳ ಕಡೆಗೆ ತಿರುಗಿ ಕೇಳಿದ.

ಅವು "ಓಹೋ" ಎಂದವು.

ಆಮೇಲೆ ಎಲ್ಲಾ ಹಿಂದಿನ ರಾತ್ರಿ ನಡೆದಿದ್ದಂತೆಯೇ ನಡೆಯಿತು. ಈ ಹುಡುಗಿಯೂ ರುಚಿರುಚಿಯಾದ ಅಡಿಗೆಯನ್ನು ತಯಾರಿಸಿ, ಅದನ್ನು ಮುದಕನಿಗೆ ಮಾತ್ರ ಕೊಟ್ಟು ತಾನೂ ತಿಂದಳು. ಆ ಪ್ರಾಣಿಗಳೂ ಹಸಿದಿರ ಬೇಕು ಎಂಬ ಯೋಚನೆ ಕೂಡ ಅವಳ ಮನಸ್ಸಿಗೆ ಬರಲಿಲ್ಲ. ಆದ್ದರಿಂದ ಅವಳು "ನಾನು ಎಲ್ಲಿ ಮಲಗಿಕೊಳ್ಳಲಿ" ಎಂದು ಪ್ರಶ್ನಿಸಿದಾಗ ಅವು "ನೀನು ಅವನೊಬ್ಬನ ಯೋಗಕ್ಷೇಮವನ್ನು ನೋಡಿಕೊಂಡೆಯೇ ಹೊರತು ಇಷ್ಟು ಹೊತ್ತೂ ನಮ್ಮ ಕಡೆ ತಿರುಗಿ ಕೂಡ ನೋಡಲಿಲ್ಲ. ಅವನನ್ನೇ ಕೇಳು" ಎಂದವು.

ಮುದುಕ ಅವಳನ್ನು ಅಟ್ಟದ ಮೇಲಿನ ಕೋಣೆಗೆ ಕಳುಹಿಸಿದ.

ಅರೆತಾಸಿನ ಅನಂತರ ಅವನು ಮೇಲಕ್ಕೆ ಬಂದಾಗ ಇವಳಾಗಲೇ ನಿದ್ದೆಯಲ್ಲಿ ಮೈಮರೆತಿದ್ದಳು. ಅವಳನ್ನು ನೋಡಿ ಅವನು ತಲೆಯಲ್ಲಾಡಿಸಿ ಹಾಸಿಗೆಯ ಕೆಳಗಿನ ನೆಲವನ್ನು ತನ್ನ ಪಾದದಿಂದ ಅದುಮಿದ. ಅವಳು ತನ್ನ ಅಕ್ಕನ ಹಾಗೆಯೇ ಹಾಸಿಗೆ ಸಹಿತ ನೆಲದೊಳಕ್ಕೆ ಕುಸಿದುಬಿದ್ದು ಮಾಯ ವಾದಳು.

ಮೂರನೆಯ ದಿವಸ ಸೌದೆಯವನು ಹೆಂಡತಿಯನ್ನು ಕುರಿತು "ಈ ದಿನ ಬುತ್ತಿಯನ್ನು ಕಿರಿಯ ಹುಡುಗಿಯ ಕೈಯಲ್ಲಿ ಕೊಟ್ಟು ಕಳುಹಿಸು. ಅವಳು ಯಾವಾಗಲೂ ಉಳಿದವರಿಬ್ಬರಿಗಿಂತಲೂ ಹೆಚ್ಚು ವಿಧೇಯತೆಯಿಂದಲೂ ಒಳ್ಳೆಯತನದಿಂದಲೂ ನಡೆದುಕೊಂಡು ಬಂದಿದ್ದಾಳೆ. ಅವಳಾದರೆ ಅತ್ತಿತ್ತ ಅಲೆದಾಡದೆ ನಾನು ಹೇಳುವ ಗುರುತುಗಳನ್ನು ಅನುಸರಿಸಿ ನೇರವಾಗಿ ನಾನಿರುವ ಕಡೆಗೆ ಬಂದುಬಿಡುತ್ತಾಳೆ" ಎಂದ.

ಹೆಂಡತಿ "ಇಬ್ಬರು ಮಕ್ಕಳು ಹೋದರು; ಇವಳನ್ನೂ ಕಳೆದುಕೊಳ್ಳ ಬೇಕೇನು ನಾನು? ಇವಳೆಂದರೆ ನನಗೆ ಪ್ರಾಣ!" ಎಂದು ರಾಗ ತೆಗೆದಳು.

ಅವನು "ಇವಳ ವಿಚಾರದಲ್ಲಿ ನೀನು ಹಾಗೆ ಹೆದರಬೇಕಾದುದೇ ಇಲ್ಲ. ಇವಳು ಅವರ ಹಾಗಲ್ಲ. ಇವಳು ಬುದ್ಧಿವಂತಳು, ಹೇಳಿದ ಹಾಗೆ ಕೇಳು

ವನಳು. ಅಮೂ ಅಲ್ಲದೆ, ಈ ದಿವಸ ನಾನು ದಾರಿಯುದ್ದಕ್ಕೂ ಸುಲಭವಾಗಿ ಅವಳ ಕಣ್ಣಿಗೆ ಗೋಚರವಾಗುವಂತಹ ಗುರುತನ್ನು ಮಾಡಿಕೊಂಡು ಹೋಗುತ್ತೇನೆ. ನಾನು ಹೋಗುವ ಮಾರ್ಗದಲ್ಲಿ ಉದ್ದಕ್ಕೂ ದೊಡ್ಡ ದೊಡ್ಡ ಕರಿಯ ಕಲ್ಲಿನ ಬಂಡೆಗಳಿವೆ. ಒಂದು ಡಬ್ಬದಲ್ಲಿ ಸುಣ್ಣದ ನೀರನ್ನು ತೆಗೆದುಕೊಂಡು ನಡೆದು, ಅಲ್ಲಿ ಆ ಬಂಡೆಗಳ ಮೇಲೆ ಸುಣ್ಣದಿಂದ ಗುರುತು ಮಾಡಿರುತ್ತೇನೆ. ಮಬ್ಬಿನಲ್ಲಿ ಕೂಡ ಅವು ಅವಳಿಗೆ ಕಾಣಬೇಕು—ಅಷ್ಟೊಂದು ಸುಣ್ಣವನ್ನು ಸುರಿದಿರುತ್ತೇನೆ" ಎಂದ.

ಆದರೆ ಕಿರಿಯ ಹುಡುಗಿ ಕಾಡಿಗೆ ಬರುವ ಹೊತ್ತಿಗೆ ಇದ್ದಕ್ಕಿದ್ದಂತೆಯೇ ಮಳೆ ಸುರಿಯತೊಡಗಿ ಸ್ವಲ್ಪ ಹೊತ್ತಿನಲ್ಲೇ ಒಳ್ಳೆ ಮುಂಗಾರು ಮಳೆಯಂತೆ ಕಾಡನ್ನೆಲ್ಲಾ ಅಪ್ಪಳಿಸಿತು. ಒಂದೊಂದು ಹನಿ ಒಂದೊಂದು ಗಜ್ಜುಗದ ಕಾಯಿಯಷ್ಟು ಗಾತ್ರ ಇದ್ದಿತು. ಇಂಥ ಮಳೆ ಬಂದರೆ ಎಂಥ ಗಟ್ಟಿ ಬಣ್ಣದಲ್ಲಿ ಹಾಕಿದ ಗೆರೆಯೂ ಅಳಿಸಿಹೋಗುತ್ತದೆ. ಇನ್ನು ಸುಣ್ಣದ ಗುರುತುಗಳ ಪಾಡೇನೆಂದು ಹೇಳಬೇಕೆ? ಬಂಡೆಗಳೆಲ್ಲಾ ಚೊಕ್ಕಟವಾಗಿ ತೊಳೆದಂತಾದವು. ಹುಡುಗಿಗೆ ದಾರಿ ತೋರಿಸಲು ಒಂದು ಸುಣ್ಣದ ಚುಕ್ಕಿ ಕೂಡ ಉಳಿಯಲಿಲ್ಲ.

ಪಾಪ, ಅವಳು ಕೆಸರಿನಲ್ಲಿ ಅತ್ತಿತ್ತ ಬಹಳ ಹೊತ್ತು ಸುತ್ತಾಡಿದಳು. ತನಗಾಗುತ್ತಿದ್ದ ಆಯಾಸಕ್ಕಿಂತಲೂ ಹೆಚ್ಚಾಗಿ ಅವಳಿಗೆ ತನ್ನ ತಂದೆ ಹಸಿದಿರುವನಲ್ಲಾ ಎಂಬ ಯೋಚನೆ ಬಾಧೆಯನ್ನುಂಟುಮಾಡಿತು. ಎಷ್ಟು ತಿರುಗಿದರೂ ಎಷ್ಟು ಹುಡುಕಾಡಿದರೂ ಎಷ್ಟು ಕೂಗಿಕೊಂಡರೂ ಅವಳಿಗೆ ತಂದೆಯಿರುವ ಸ್ಥಳ ಗೊತ್ತಾಗಲಿಲ್ಲ. ಕೊನೆಗ ಕತ್ತಲಾಗುವ ಸಮಯಕ್ಕೆ ಅವಳು ತನ್ನ ಅಕ್ಕಂದಿರಿಬ್ಬರೂ ಆಶ್ರಯ ಪಡೆದಿದ್ದ ಮನೆಯ ದೀಪವನ್ನು ಕಂಡು ಅಲ್ಲಿಗೆ ನಡೆದಳು.

ಎಂದಿನಂತೆಯೇ ಆ ಮನೆಯ ಮುದುಕ ಅವಳನ್ನು ಒಳಕ್ಕೆ ಬರಹೇಳಿದ.

ಅವಳು ಮನೆಯನ್ನು ಪ್ರವೇಶಿಸಿ, ತಾನು ಒಂದು ರಾತ್ರಿ ಅಲ್ಲಿ ಇಳಿದುಕೊಳ್ಳಲು ಒಪ್ಪಿಗೆ ಕೊಡಬೇಕೆಂದು ಬಹು ನಮ್ರತೆಯಿಂದ ಅವನನ್ನು ಬೇಡಿದಳು. ಅವಳ ಧ್ವನಿಯಲ್ಲಿ ದೈನ್ಯ ತುಂಬಿತ್ತು.

ಸರಿ—ಮುದುಕ ತನ್ನ ಪ್ರಾಣಿಗಳ ಕಡೆಗೆ ತಿರುಗಿ "ಏನು ಹೇಳುತ್ತೀರಿ ?" ಎನ್ನುವವನಂತೆ ನೋಡಿದ.

ಅವು "ಅಗತ್ಯವಾಗಿ ಆಗಬಹುದು" ಎಂದವು.

ಕೂಡಲೆ ಹುಡುಗಿ ಅವುಗಳ ಬಳಿಗೆ ಹೆಜ್ಜೆಯಿಟ್ಟು ಅವುಗಳ ಮೈಮೇಲೆ ಕೈಯಾಡಿಸಿ ಅವನ್ನು ಪ್ರೇಮದಿಂದ ಮಾತಾಡಿಸಿ ತನ್ನ ಕೃತಜ್ಞತೆಯನ್ನು ಸೂಚಿಸಿದಳು.

ಅನಂತರ ಅವಳು ಮುದುಕನ ಅಪ್ಪಣೆಯ ಪ್ರಕಾರ ಅಡಿಗೆಯ ಮನೆಗೆ ಹೋಗಿ ಸ್ವಲ್ಪ ಹೊತ್ತಿನಲ್ಲೇ ಒಳ್ಳೆಯ ಬಿಸಿಯೂಟವನ್ನು ತಯಾರಿಸಿದಳು. ಆದರೆ ಅವಳು ತನ್ನ ಅಕ್ಕಂದಿರಂತೆ ಅದನ್ನು ತಾನೊಬ್ಬಳೇ ಮೊದಲು ಮುಗಿಸಿ ಬಿಡಲು ಆತುರಪಡಲಿಲ್ಲ. "ನನಗೇನು ಅವಸರ ? ಪಾಪ ಆ ಬಡಪ್ರಾಣಿಗಳು ಎಷ್ಟು ಹೊತ್ತಿನಿಂದ ಹಸಿದುಕೊಂಡು ಬಿದ್ದಿವೆಯೋ ಏನೋ ! ಮೊದಲು ಅವುಗಳ ಹೊಟ್ಟೆಗೆ ಏನಾದರೂ ಕೊಟ್ಟು ಬರುತ್ತೇನೆ" ಎಂದು ಯೋಚಿಸಿ ಮನೆಯನ್ನೆಲ್ಲಾ ಹುಡುಕಿದಳು. ಒಂದು ಕಡೆ ಒಂದು ಗೂಡೆಯಲ್ಲಿ ಜೋಳದ ಕಾಳಿತ್ತು. ಹಿತ್ತಲಲ್ಲಿ ನೊಗನಾದ ಹುಲ್ಲಿತ್ತು. ಒಂದು ಹಿಡಿ ಜೋಳವನ್ನೂ ಒಂದು ದೊಡ್ಡ ತೆಕ್ಕೆ ಹುಲ್ಲನ್ನೂ ತೆಗೆದುಕೊಂಡು ಹೋಗಿ ಕೋಳಿಗೂ ಹಸುವಿಗೂ ಕೊಟ್ಟಳು. ತಾನು ಮಾಡಿಟ್ಟಿದ್ದ ಅನ್ನದಲ್ಲೇ ಒಂದಿಷ್ಟನ್ನು ನಾಯಿಗೆ ನೀಡಿದಳು. ಇದಾದ ಮೇಲೆ ಒಂದು ಪಾತ್ರೆಯಲ್ಲಿ ನೀರನ್ನು ತಂದು ಅವುಗಳ ಮುಂದಿಟ್ಟಳು. ಮೂರು ಪ್ರಾಣಿಗಳೂ ತೃಪ್ತಿಯಾಗುವವರೆಗೂ ತಮ್ಮ ತಮ್ಮ ಆಹಾರವನ್ನು ತಿಂದು ಬಾಯಾರಿಕೆಯನ್ನು ಪರಿಹರಿಸಿಕೊಂಡ ನಂತರ ಅವಳು ಮುದುಕನ ಸಮೀಪಕ್ಕೆ ಬಂದು ಅವನಿಗೆ ಬಡಿಸಿದಳು. ಆವನ ಊಟ ಪೂರ್ತಿಯಾಗುವತನಕ ಅವಳು ಒಂದು ಅಗುಳನ್ನು ಕೂಡ ಮುಟ್ಟಲಿಲ್ಲ. ಮಧ್ಯೆಮಧ್ಯೆ ಮೃದುವಾದ ಕನಿಕರ ತುಂಬಿದ ಧ್ವನಿಯಲ್ಲಿ ಅವಳು ಅವನಿಗೆ ಅನೇಕ ಉಪಚಾರದ ಮಾತುಗಳನ್ನು ಹೇಳಿದಳು. ಕೊನೆಗೆ, ಅವನು ಉಂಡು ಉಳಿದಿದ್ದುದನ್ನು ತಾನು ತಿಂದು, ಅಷ್ಟರಿಂದಲೇ ಸಂತೋಷ ಗೊಂಡಳು.

ರಾತ್ರಿ ಬೆಳೆದಂತೆಲ್ಲಾ ಆ ಪ್ರಾಣಿಗಳಿಗೆ ನಿದ್ದೆಯ ಜೋಂಪು ಬಲವಾಯಿತು.

ಮುದುಕನೂ ತೂಕಡಿಸತೊಡಗಿದ. ಇದನ್ನು ಕಂಡು ಅವಳು "ಗೆಳೆಯರೆ, ಇನ್ನು ಮಲಗೋಣವೆ ?" ಎಂದಳು.

ಅವು "ಅಗತ್ಯವಾಗಿ ಆಗಬಹುದು. ನೀನು ನಮ್ಮ ಕಷ್ಟಸುಖಗಳನ್ನು ವಿಚಾರಿಸಿಕೊಂಡಿರುವೆ. ನಮಗೆ ಅತಿಶಯವಾದ ಕರುಣೆ ತೋರಿಸಿರುವೆ. ನಿನಗೆ ರಾತ್ರಿ ಸುಖವಾಗಿ ನಿದ್ದೆ ಬರಲಿ" ಎಂದು ಹಾರೈಸಿದವು.

ಮುದುಕ "ಅಟ್ಟದ ಮೇಲಕ್ಕೆ ಹತ್ತಿಹೋಗು. ಅಲ್ಲಿ ಎರಡು ಹಾಸಿಗೆ ಸುರುಳಿಗಳಿವೆ. ಒಂದು ನಿನಗೆ, ಒಂದು ನನಗೆ" ಎಂದ.

ಅವಳು ಮರುಮಾತಾಡದೆ ಏಣಿಯನ್ನು ಏರಿದಳು. ಅಟ್ಟದ ಮೇಲೆ ಎಂದಿನಂತೆ ಎರಡು ಹಾಸಿಗೆಗಳಿದ್ದವು. ಅವಳು ಅವುಗಳೆರಡನ್ನೂ ಬಿಚ್ಚಿ, ಚೆನ್ನಾಗಿ ಒದರಿ, ಹಾಸಿದಳು. ಅಷ್ಟರಲ್ಲಿ ಮುದಕನೂ ಮೇಲಕ್ಕೆ ಬಂದ. ಅವನು ತನಗೆ ಬೇಕಾದ ಹಾಸಿಗೆಯ ಮೇಲೆ ಮಲಗಿ ಕಣ್ಣುಮುಚ್ಚಿಕೊಳ್ಳುವ ವರೆಗೂ ಸುಮ್ಮನಿದ್ದು ಆಮೇಲೆ ಅವಳು ಇನ್ನೊಂದು ಹಾಸಿಗೆಯ ಮೇಲೆ ತಾನು ಮಲಗಿಕೊಂಡಳು. ಮಲಗುವ ಮೊದಲು ತನ್ನನ್ನು ಇಷ್ಟರಮಟ್ಟಿಗೆ ವಿಪತ್ತಿನಿಂದ ಪಾರುಮಾಡಿ ಕಾಪಾಡಿದ್ದಕ್ಕಾಗಿ ದೇವರನ್ನು ಮನಸ್ಸಿನಲ್ಲೇ ವಂದಿಸಿದಳು.

ಒಂದೆರಡು ತಾಸುಗಳು ಅವಳು ಅತ್ತಿತ್ತ ಕದಲಲಿಲ್ಲ. ನಟ್ಟಿರುಳಿನ ನಿಶ್ಯಬ್ದತೆ ಎಲ್ಲೆಲ್ಲೂ ತುಂಬಿತ್ತು.

ಮಧ್ಯರಾತ್ರಿಯಾಯಿತು. ಅವಳು ಎಚ್ಚೆತ್ತಳು. ಏಕೆಂದರೆ ಆಗ ಇದ್ದಕ್ಕಿದ್ದಂತೆಯೇ ಮನೆಯಲ್ಲೆಲ್ಲಾ ಬಗೆಬಗೆಯ ರೀತಿಯಲ್ಲಿ ಸದ್ದಾಯಿತು ; ಮೂಲೆ ಮೂಲೆಗಳಲ್ಲೂ ಕಿರುಕುಲು ದನಿ ಕೇಳಿಬಂತು. ಮುಚ್ಚಿದ್ದ ಬಾಗಿಲುಗಳು ತಾವಾಗಿಯೇ ದಢಾರನೆ ತೆರೆದುಕೊಂಡವು, ತೊಲೆಗಳು ತಮ್ಮನ್ನು ಯಾರೋ ಬುಡಮೇಲು ಮಾಡುತ್ತಿರುವರೆಂಬಂತೆ ನರಳಿದವು, ಏಣಿ ಧೊಪ್ಪನೆ ನೆಲಕ್ಕೆ ಬಿತ್ತು ; ಹೆಂಚುಗಳೆಲ್ಲಾ ಕೆಳಕ್ಕೆ ಬಿದ್ದುಬಿಡುವ ಹಾಗೆ ಅಲುಗಾಡಿದವು. ಆದರೆ ಒಂದೆರಡು ಚಣದಲ್ಲಿ ಮತ್ತೆ ಎಲ್ಲವೂ ಸ್ತಬ್ಧವಾಯಿತು ; ಮತ್ತೆ ಮನೆಯನ್ನು ಮೌನ ಆವರಿಸಿತು. ಆದ್ದರಿಂದ ಹುಡುಗಿ ಹಾಗೆಯೇ ಮತ್ತೆ ಕಣ್ಣು ಮುಚ್ಚಿಕೊಂಡು ನಿದ್ದೆಹೋದಳು.

ಬೆಳಗಾಯಿತು. ಅವಳು ಕಣ್ಣು ತೆರೆದು ನೋಡುತ್ತಾಳೆ — ಎಲ್ಲೆಲ್ಲೂ ಏನು ಬದಲಾವಣೆ ಆಗಿ ಹೋಗಿದೆ! ಕಾಡಿನ ಆ ಮುರುಕು ಮನೆ ಒಂದು ಭವ್ಯವಾದ ವನಮಂದಿರವಾಗಿಹೋಗಿತ್ತು. ಅವಳು ತನ್ನನ್ನು ತಾನೇ ನಂಬದಾದಳು. ಈಗ ಅವಳು ಮಲಗಿದ್ದುದು ರಾಜ ರಾಣಿಯರಿಗೆ ತಕ್ಕ ವೈಭವದಿಂದ ತುಂಬಿದ್ದ ವಿಶಾಲವಾದ ಕೋಣೆಯೊಂದರಲ್ಲಿ. ಗೋಡೆಗಳ ಮೇಲೆ ಉದ್ದಕ್ಕೂ ಹಸುರು ರೇಷ್ಮೆಯ ತೆರೆಗಳು ತೂಗಾಡುತ್ತಿದ್ದವು. ಅವುಗಳ ಮೇಲೆ ಬಂಗಾರದ ಬಣ್ಣದ ಹೂಗಳು ಮುದ್ರಿತವಾಗಿದ್ದವು. ಅವಳು ಮಲಗಿದ್ದ ಬಡಹಾಸಿಗೆ ಕೆಂಪು ಕಿನಕಾಬಿನ ಸುಪ್ಪತ್ತಿಗೆಯಾಗಿತ್ತು. ಆ ಹಾಸಿಗೆಯು ಕೆಳಗೆ ಕಣ್ಣುಗಳನ್ನು ಸೆರೆಹಿಡಿಯುವಂತಹ ಅತ್ಯಂತ ಬೆಲೆಬಾಳುವ ದಂತದ ಮಂಚವಿತ್ತು. ಅದರ ಪಕ್ಕದಲ್ಲೇ ಗಾಜಿನ ಕಾಲ್ಮಣೆಯೊಂದಿತ್ತು. ಅದರ ಮೇಲೆ ಮುತ್ತುರತ್ನಗಳಿಂದ ಅಲಂಕೃತವಾದ ಒಂದು ಜೊತೆ ಮಕಮಲಿನ ಜೋಡುಗಳಿದ್ದವು.

ಇವನ್ನೆಲ್ಲಾ ಕಂಡು ಹುಡುಗಿಗೆ ತಾನು ಕನಸು ಕಾಣುತ್ತಿರಬೇಕು ಎನ್ನಿಸಿತು. ಅವಳು ಆಶ್ಚರ್ಯಭರಿತಳಾಗಿ ಸುತ್ತಲೂ ನೋಡುತ್ತಿರಲು ಆಕರ್ಷಕವಾದ ವಸ್ತ್ರಗಳನ್ನು ಧರಿಸಿದ್ದ ಮೂವರು ಸೇವಕರು ಬಂದು ಅವಳ ಎದುರಿಗೆ ನಿಂತು "ಏನುಬೇಕು? ಅಪ್ಪಣೆಯಾಗಲಿ" ಎಂದರು.

ಅವಳು "ನಾನು ಬಡವರ ಮನೆಯಲ್ಲಿ ಹುಟ್ಟಿ ಬೆಳೆದವಳು. ನನಗೇಕೆ ಆಳುಗಳು? ನೀವು ಹೊರಡಿ. ನಾನೇ ಎದ್ದು ಮನೆಗೆಲಸವನ್ನೆಲ್ಲಾ ಮುಗಿಸಿ, ಬೇಗ ಅಡಿಗೆಮಾಡಿ ಪಾಪ ಆ ಅಜ್ಜನಿಗೂ ಆ ಪ್ರಾಣಿಗಳಿಗೂ ಊಟಕ್ಕಿಡುತ್ತೇನೆ" ಎಂದು ಮುದುಕ ಮಲಗಿದ್ದ ಹಾಸಿಗೆಯ ಕಡೆಗೆ ಕಣ್ಣು ಹೊರಳಿಸಿದಳು. ಅವಳ ಕೌತುಕ ಇನ್ನಷ್ಟು ಹೆಚ್ಚಿತು. ಏಕೆಂದರೆ ಅಲ್ಲಿದ್ದವನು ಕೆನ್ನೆಯಿಂದ ಕಾಲಿನವರೆಗೂ ಬೆಳೆದಿದ್ದ ಉದ್ದನೆಯ ಗಡ್ಡದ ವೃದ್ಧನಲ್ಲ, ಸುಂದರನಾದ ಯುವಕ. ಅವಳು ಅವನನ್ನೇ ದಿಟ್ಟಿಸಿ ನೋಡುತ್ತಿರಲು ಅವನು ಕಣ್ಣು ತೆರೆದು, ಎದ್ದು ಕುಳಿತು, "ನಾನೊಬ್ಬ ರಾಜಕುಮಾರ. ಒಬ್ಬ ಮಾಟಗಾತಿಯ ಶಾಪದ ಫಲವಾಗಿ ನೀನು ನಿನ್ನೆ ರಾತ್ರಿ ಕಂಡ ಹಣ್ಣು ಮುದುಕನಾಗಿ ಈ ಕಗ್ಗಾಡಿನಲ್ಲಿ ಒಂಟಿಯಾಗಿ ಇದ್ದೆ. ನನ್ನ ಮೂವರು ಆಪ್ತಸೇವಕರು ಮಾತ್ರ ನನ್ನ ಬಳಿ ಇರಲು ಅವಕಾಶವಿತ್ತು. ಅವರೂ ಕೂಡ ಒಬ್ಬೊಬ್ಬನು ಒಂದೊಂದು ಮೂಕ ಪ್ರಾಣಿಯಾಗಿದ್ದನು. ನೀನು ನೋಡಿದ ಕೋಳಿ, ನಾಯಿ ಮತ್ತು ಹಸುಗಳೇ

ಅವರು. ಅವರಿಗೂ ಮನುಷ್ಯರೂಪ ಮರಳಿ ಬಂದಿದೆ. ಈಗ ತಾನೇ ಬಂದು ನಿನ್ನನ್ನು ಮಾತಾಡಿಸಿ ಹೋದ ಆಳುಗಳು ಅವರೇ. ನನಗೆ ಮಾತ್ರವೇ ಅಲ್ಲದೆ ಆ ಮೂಕ ಜೀವಿಗಳಿಗೂ ಕನಿಕರ ತೋರಿಸುವ ಹುಡುಗಿಯೊಬ್ಬಳು ಬಂದ ಹೊರತು ನಾವು ಉದ್ಧಾರವಾಗುವಹಾಗಿರಲಿಲ್ಲ. ನಮ್ಮ ಅದೃಷ್ಟದಿಂದ ನೀನು ಬಂದೆ. ನಿನ್ನೆ ಮಧ್ಯರಾತ್ರಿ ನಮಗೆ ಶಾಪದಿಂದ ಬಿಡುಗಡೆ ದೊರೆತು, ಕಾಡಿನ ಕಿರುಮನೆ ಮತ್ತೆ ನನ್ನ ಅರಮನೆಯಾಯಿತು. ಎಲ್ಲಾ ನಿನ್ನದಯೆ " ಎಂದ.

ಅವರಿಬ್ಬರೂ ಎದ್ದು ಮೈತೊಳೆದು ನೊಗಸಾದ ವಸ್ತ್ರಾಭರಣಗಳನ್ನು ಧರಿಸಿದರು. ರಾಜಕುಮಾರ ತನ್ನ ಆಳುಗಳನ್ನು ಕರೆದು ಅವರೆಲ್ಲರೂ ಆ ಹುಡುಗಿಯ ಊರಿಗೆ ಹೋಗಿ ಅವಳ ತಂದೆ ತಾಯಿಗಳನ್ನು ಸಕಲ ಮರ್ಯಾದೆಗಳೊಡನೆ ಕರೆದುಕೊಂಡು ಬರಬೇಕೆಂದು ಆಜ್ಞಾಪಿಸಿದ.

ಅವಳು "ಅದು ಸರಿ ; ನನ್ನ ಅಕ್ಕಂದಿರಿಬ್ಬರೂ ಎಲ್ಲಿ ?" ಎಂದು ಕೇಳಿದಳು.

ಅವನು "ಅವರನ್ನು ಒಂದು ನೆಲೆಮಾಳಿಗೆಯಲ್ಲಿ ಬಂಧಿಸಿಟ್ಟಿದ್ದೇನೆ. ಮೂಕಪ್ರಾಣಿಗಳನ್ನೂ ಮನುಷ್ಯರಂತೆಯೇ ಕಂಡು ಪ್ರೀತಿಸುವುದನ್ನು ಕಲಿಯುವ ವರೆಗೂ ಅವರು ಅಲ್ಲೇ ಇರಬೇಕು " ಎಂದ.

# ಕೊಳಕಮ್ಮ

ಒಬ್ಬ ಶ್ರೀಮಂತನಿದ್ದ. ಅವನ ಹೆಂಡತಿ ಒಂದು ಸಾರಿ ಕಾಯಿಲೆಯಿಂದ ಹಾಸಿಗೆ ಹಿಡಿದವಳು ಮೇಲಕ್ಕೇಳಲೇ ಇಲ್ಲ. ಸಾಯುವ ಮೊದಲು ಅವಳು ತನ್ನ ಪುಟ್ಟ ಮಗಳನ್ನು ಹತ್ತಿರ ಕರೆದು, "ಮಗು ನೀನು ಯಾವಾಗಲೂ ಒಳ್ಳೆಯ ಹುಡುಗಿಯಾಗಿರಬೇಕು. ನಾನು ನಿನ್ನನ್ನು ಸ್ವರ್ಗದಿಂದ ನೋಡುತ್ತಿರುತ್ತೇನೆ" ಎಂದು ಹರಸಿ ಕಣ್ಣುಮುಚ್ಚಿಕೊಂಡಳು. ಶ್ರೀಮಂತ ಹೆಂಡತಿಯ ಶವವನ್ನು ಮನೆಯ ಹಿಂದುಗಡೆ ಇದ್ದ ವಿಶಾಲವಾದ ಹಿತ್ತಲಿನ ಒಂದು ಮೂಲೆಯಲ್ಲಿ ಹೂಳಿದ. ಹುಡುಗಿ ಪ್ರತಿದಿನವೂ ತಾಯಿಯ ಸಮಾಧಿಯಿದ್ದ ಸ್ಥಳಕ್ಕೆ ಹೋಗಿ ಬಹಳ ಹೊತ್ತು ಅತ್ತು ಬರುತ್ತಿದ್ದಳು. ಆಕೆಯ ಮಾತಿನಂತೆಯೇ ಅವಳು ಎಲ್ಲರೊಡನೆಯೂ ಒಳ್ಳೆಯತನದಿಂದ ವರ್ತಿಸಿ ಎಲ್ಲರಿಗೂ ತನ್ನ ಕೈಲಾದಷ್ಟು ಕರುಣೆ ತೋರಿಸುತ್ತಿದ್ದಳು.

ಚಳಿಗಾಲ ಕಳೆದು ಚೈತ್ರಮಾಸ ಬಂತು. ಊರಿನಲ್ಲೆಲ್ಲಾ ನೂರಾರು ಮದುವೆಗಳು ನಡೆದವು. ಬಡವರೆಲ್ಲಾ ಹೆಂಡಂದಿರೊಡನೆ ವೈಭವದಿಂದ ಮೆರೆಯುತ್ತಿರುವುದನ್ನು ಕಂಡು ಹಣಗಾರನ ಹೊಟ್ಟೆ ಉರಿಯದಿದ್ದೀತೆ? ಶ್ರೀಮಂತ ತಾನೂ ಇನ್ನೊಮ್ಮೆ ಮದುವೆ ಮಾಡಿಕೊಂಡು ಹೊಸ ಹೆಂಡತಿಯನ್ನು ಮನೆಗೆ ಕರೆತಂದ.

ಕೆಲವು ವರುಷಗಳಲ್ಲೇ ಈ ಎರಡನೆಯ ಹೆಂಡತಿಗೆ ಇಬ್ಬರು ಹೆಣ್ಣು ಮಕ್ಕಳು ಹುಟ್ಟಿದರು. ಇಬ್ಬರೂ ಚೆಲುವೆಯರು. ಆದರೆ ಅವರ ಮುಖಗಳು ಎಷ್ಟು ಚೆನ್ನಾಗಿದ್ದವೋ ಹೃದಯಗಳು ಅಷ್ಟು ಹೊಲಸಾಗಿದ್ದವು. ಅವರು ಅಸೂಯಾಪರರು, ಇತರರಿಗೆ ಕಾರಣವಿಲ್ಲದಿದ್ದರೂ ಕೆಡುಕುಮಾಡುವ ಸ್ವಭಾವದವರು. ಅವರಿಗೆ ಬುದ್ಧಿ ಬಂದಂದಿನಿಂದ ತಾಯಿಯಿಲ್ಲದ ತಬ್ಬಲಿಯಾದ ಮೊದಲನೆಯ ಹೆಂಡತಿಯ ಮಗಳಿಗೆ ದುರವಸ್ಥೆ ಆರಂಭವಾಯಿತು. ಅವಳು

ತಮ್ಮೊಡನೆ ಮನೆಯ ಮುಂಭಾಗದ ಹಜಾರದಲ್ಲಿ ಕುಳಿತಿದ್ದರೆ, ತಾಯಿ ಮಕ್ಕಳು ಮೂವರೂ ಒಂದಾಗಿ, "ನಿನಗೇನು ಕೆಲಸ ಇಲ್ಲಿ—ನಮ್ಮಂತಹ ಉತ್ತಮರ ಜೊತೆಯಲ್ಲಿ? ಬಿಟ್ಟಿಯಾಗಿ ಕೂಳು ಕತ್ತರಿಸಿ ಹೊಟ್ಟೆ ಬೆಳೆಸುತ್ತಿದ್ದೀಯ! ನಿನಗೆ ದುಡಿಮೆ ಹಾಕುವವರು ಯಾರು? ಹೋಗು, ಏನಾದರೂ ಕೆಲಸ ಮಾಡಿ ನಿನ್ನ ಪಾಲಿನ ಅನ್ನಕ್ಕೆ ಹಸ್ಕನ್ನು ಸಂಪಾದಿಸು. ಇಲ್ಲದಿದ್ದರೆ ಇನ್ನುಮೇಲೆ ನಿನಗೆ ಎಡಮುಗ್ಗುಲೇ ಗತಿ!" ಎಂದು ದುರಹಂಕಾರದ ಮಾತುಗಳನ್ನಾಡಿ ಅವಳನ್ನು ಅಲ್ಲಿಂದ ಅಟ್ಟಿಬಿಡುತ್ತಿದ್ದರು. ಕೊನೆಗೆ, ಮನೆಯಲ್ಲಿದ್ದ ಪರಿಚಾರಕಿಯನ್ನು ಕೆಲಸದಿಂದ ತೆಗೆದುಹಾಕಿ, ಆ ಹುಡುಗಿಯ ಮೇಲೆ ಅಡುಗೆಯ ಮನೆಯ ಎಲ್ಲ ಕರ್ತವ್ಯಗಳ ಹೊರೆಯನ್ನೂ ಹೊರಿಸಿದರು. ಅವಳು ಅದುವರೆಗೂ ಧರಿಸುತ್ತಿದ್ದ ಒಳ್ಳೆಯ ವಸ್ತ್ರಾಭರಣಗಳನ್ನೆಲ್ಲಾ ಕಿತ್ತುಕೊಂಡು ತಾವು ಉಟ್ಟುಬಿಟ್ಟ ಹಳೆಯ ಹರಕು ಬಟ್ಟೆಗಳನ್ನು ಅವಳಿಗೆ ಕೊಟ್ಟರು. ಅವಳು ಮೂರು ಹೊತ್ತೂ ಕಸ ಮುಸುರೆಗಳ ಮಧ್ಯೆ ಅಥವಾ ಒಲೆಯ ಮುಂದೆ ಕಾಲ ಕಳೆಯತೊಡಗಿದಳು. ಅದರ ಫಲವಾಗಿ ಅವಳ ಮೈ ಮೈಯೆಲ್ಲಾ ಸದಾ ಮಣ್ಣಿನಿಂದಲೂ ಮಸಿಯಿಂದಲೂ ಬೂದಿಯಿಂದಲೂ ಮಲಿನವಾಗಿರುತ್ತಿತ್ತು. ರಾಜಕುಮಾರಿಯಂತಿದ್ದ ಹುಡುಗಿ ತನ್ನ ತಂದೆಯ ಮನೆಯಲ್ಲೇ ಕೂಲಿಯಾಳಿಗಿಂತಲೂ ಕಡೆಯಾದಳು. ಅವಳು ಹೀಗಾದುದಕ್ಕೆ ತಾವೇ ಕಾರಣರೆಂಬುದನ್ನು ಮರೆತು ಅವಳ ಮಲತಾಯಿಯೂ ಬಲತಂಗಿಯರೂ ಅವಳನ್ನು ನೋಡಿ ಹೀಯಾಳಿಸಿ ನಕ್ಕು ಎಲ್ಲರೆದುರಿಗೂ ಅವಳನ್ನು "ಕೊಳಕಮ್ಮ" ಎಂದು ಕರೆದು ಅವಳ ಮನಸ್ಸಿಗೆ ಇನ್ನಷ್ಟು ನೋವನ್ನು ಉಂಟುಮಾಡುತ್ತಿದ್ದರು. ನೆರೆಹೊರೆಯವರೆಲ್ಲರೂ ಅದೇ ಹೆಸರನ್ನೇ ಪಟ್ಟಾಗಿ ಹಿಡಿದುಕೊಂಡರು.

ಒಂದು ದಿನ ಅವರ ತಂದೆ ಯಾವುದೋ ಜಾತ್ರೆಗೆ ಹೊರಟ. ಹೊರಡುವ ಮೊದಲು ಚಿಕ್ಕಮಕ್ಕಳಿಬ್ಬರನ್ನೂ ಹತ್ತಿರ ಕರೆದು ಅವರ ತಲೆಸವರಿ, ತಾನು ಹಿಂದಿರುಗಿ ಬರುವಾಗ ಅವರಿಗೆ ಏನೇನು ತರಬೇಕೆಂದು ಕೇಳಿದ.

ಅವರಲ್ಲಿ ದೊಡ್ಡವಳು ಒಳ್ಳೊಳ್ಳೆಯ ಬಟ್ಟೆಗಳು ಬೇಕೆಂದಳು; ಕಿರಿಯವಳು ಮುತ್ತುರತ್ನಗಳು ಬೇಕೆಂದಳು.

ಅನಂತರ ಅವನು ಅಡುಗೆಯ ಮನೆಯಲ್ಲಿ ನೆಲ ಸಾರಿಸುತ್ತಿದ್ದ ಮೊದಲ ಹೆಂಡತಿಯ ಮಗಳನ್ನೂ ಕೂಗಿ, "ಏನೇ, ಜಾತ್ರೆಗೆ ಹೋಗುತ್ತೇನೆ.

ಇವರಿಬ್ಬರಿಗೂ ಒಟ್ಟಿಗಳೂ ಮುತ್ತುರತ್ನಗಳೂ ಬೇಕಂತೆ. ನಿನಗೂ ಏನಾದರೂ ತರಲೇನು ?" ಎಂದ.

ಅವಳು "ಅಪ್ಪ, ನನಗೆ ಅವೊಂದೂ ಬೇಡ. ನೀನು ಜಾತ್ರೆಯನ್ನು ಮುಗಿಸಿಕೊಂಡು ಮನೆಯ ಕಡೆಗೆ ಬರುವಾಗ ದಾರಿಯಲ್ಲಿ ಮೊಟ್ಟಮೊದಲು ನಿನ್ನ ಕಣ್ಣಿಗೆ ಬೀಳುವ ಮರದ ಒಂದು ಸಣ್ಣ ರೆಂಬೆಯನ್ನು ತಂದುಕೊಡು, ಅಷ್ಟು ಸಾಕು" ಎಂದಳು.

"ಬೆಪ್ಪುಹುಡುಗಿ !" ಎಂದುಕೊಂಡು ಅವನು ಜಾತ್ರೆಗೆ ಹೊರಟ. ಅಲ್ಲಿ ಅವನು ತನ್ನ ಈಗಿನ ಹೆಂಡತಿಯ ಮಕ್ಕಳಿಬ್ಬರೂ ಬಯಸಿದ್ದ ಒಟ್ಟಿಗಳನ್ನೂ ಮುತ್ತು ರತ್ನಗಳನ್ನೂ ಕೊಂಡಿಟ್ಟುಕೊಂಡ. ವಾಪಸು ಬರುವಾಗ ದಾರಿಯಲ್ಲಿ ಅವನ ಕಣ್ಣಿಗೆ ಮೊದಲು ಬಿದ್ದದ್ದು ಒಂದು ಕೊಂಡಮಾವಿನ ಮರ. ಅದರ ಹಚ್ಚ ಹಸುರಿನ ಎಲೆಗಳು ಬಿಸಿಲಿನಲ್ಲಿ ಥಳಥಳಿಸಿ ದೂರದಿಂದಲೇ ಅವನ ಕೈಗೇ ಎಟುಕುವಂತಿದ್ದವು. ಅವನು ಹೊಸ ತಳಿರಿನಿಂದ ಕೂಡಿ ಸುಂದರವಾಗಿ ಕಾಣುತ್ತಿದ್ದ ಒಂದು ಕೊಂಬೆಯನ್ನೇ ಮುರಿದು ಗಾಡಿಯಲ್ಲಿಟ್ಟುಕೊಂಡು ಮುಂದುವರಿದು ಮನೆ ಸೇರಿದ.

ಕೊಳಕಮ್ಮ ಆ ಕೊಂಬೆಯನ್ನು ಭಕ್ತಿಯಿಂದಲೂ ಗೌರವದಿಂದಲೂ ಕೈಗೆ ತೆಗೆದುಕೊಂಡು ಹಿತ್ತಲಿಗೆ ಓಡಿ ತಾಯಿಯ ಸಮಾಧಿಯ ಮೇಲೆ ಅದನ್ನು ನೆಟ್ಟು, ಬಹಳ ಹೊತ್ತು ಅದರ ಪಕ್ಕದಲ್ಲೇ ಕುಳಿತು ಕಣ್ಣೀರು ಸುರಿಸಿದಳು. ಅವಳ ಕಣ್ಣೀರು ಅದಕ್ಕೆ ಜೀವರಸದಂತಾಯಿತು. ಅದು ಅಲ್ಲಿ ಬೇರುಬಿಟ್ಟು ದಿನೇ ದಿನೇ ಬೆಳೆದು ದೊಡ್ಡ ಮರವಾಯಿತು. ಹೀಗೆಯೇ ಪ್ರತಿದಿವಸವೂ ಮೂರುಸಾರಿ ಅವಳು ಆ ಮರದಡಿಗೆ ಹೋಗಿ ಕಣ್ಣೀರು ಸುರಿಸುತ್ತಿದ್ದಳು. ಅದು ಮರವಾದ ಸ್ವಲ್ಪ ಕಾಲದಲ್ಲೇ ಎರಡು ಪುಟ್ಟ ಪಾರಿವಾಳಗಳು ಎಲ್ಲಿಂದಲೋ ಬಂದು ಅದರ ತಳಿರಿನ ನಡುವೆ ಗೂಡು ಕಟ್ಟಿಕೊಂಡು ವಾಸ ಮಾಡತೊಡಗಿದವು. ಒಂದು ಗಂಡು, ಒಂದು ಹೆಣ್ಣು. ಅವು ಅವಳೊಡನೆ ಮಾತಾಡಿ, ಅವಳ ಹಿತಚಿಂತಕರಂತೆ ವರ್ತಿಸಿ, ಅವಳಿಗೆ ಬೇಕಾದುದನ್ನೆಲ್ಲಾ ತಂದುಕೊಡುತ್ತಿದ್ದವು.

ಹೀಗಿರುವಾಗ, ಆ ಊರಿನ ರಾಜ ಒಂದು ಹುಣ್ಣಿಮೆಯ ರಾತ್ರಿ ಬೆಳುದಿಂಗಳಲ್ಲಿ ವನಭೋಜನವನ್ನು ಏರ್ಪಡಿಸಿದ. ಚಂದ್ರೋದಯವಾದ

ಕೂಡಲೆ ತಮ್ಮ ಹೆಂಡತಿ ಮಕ್ಕಳೊಡನೆ ಅರಮನೆಯ ಉಪವನಕ್ಕೆ ಬರಬೇಕೆಂದು ಊರಿನ ಶ್ರೀಮಂತರೆಲ್ಲರಿಗೂ ಮಂತ್ರಾಕ್ಷತೆ ಹೋಯಿತು. ಅವರಿಗೆ ಊಟ ಹಾಕಬೇಕೆಂಬುದು ರಾಜನ ಮುಖ್ಯ ಉದ್ದೇಶವಲ್ಲ. ಅವನ ಹಿರಿಯ ಮಗ—ಮುಂದೆ ರಾಜನಾಗುವವನು, ಯುವರಾಜ—ಪ್ರಾಯಕ್ಕೆ ಬಂದಿದ್ದ. ಅವನಿಗೆ ಆದಷ್ಟು ಬೇಗ ಮದುವೆ ಮಾಡಬೇಕೆಂದು ರಾಜರಾಣಿಯರಿಬ್ಬರಿಗೂ ಅಪೇಕ್ಷೆ ಪ್ರಬಲವಾಗಿತ್ತು. ಆದರೆ ಅವರು ಯಾವ ಹೆಣ್ಣನ್ನು ಹುಡುಕಿ ತಂದರೂ ರಾಜಕುಮಾರ ಏನಾದರೂ ಒಂದು ನೆವ ಹೇಳಿ ಬೇಡವೆನ್ನುತ್ತಿದ್ದ, ಈಗ ಊರಿನ ದೊಡ್ಡ ಮನುಷ್ಯರನ್ನೆಲ್ಲಾ ಸಂಸಾರಸಹಿತರಾಗಿ ಕರೆಸಿಕೊಂಡರೆ, ಹಾಗೆ ಅವರೊಡನೆ ಬರುವ ಹೆಂಗಸರಲ್ಲಿ ರಾಜಕುಮಾರನ ಮನಸ್ಸಿಗೆ ಒಪ್ಪಿಗೆಯಾಗುವ ಚೆಲುವೆ ಯಾರಾದರೂ ಇರಬಹುದು, ಸುಂದರವಾದ ಬೆಳುದಿಂಗಳಿನಲ್ಲಿ ರಾಜೋದ್ಯಾನದ ಮಧುರ ವಾತಾವರಣದಲ್ಲಿ ಅವಳನ್ನು ನೋಡಿ, ಅವಳೊಡನೆ ಮಾತಾಡಿ, ಭೋಜನ ಮಾಡಿದರೆ ಅವನು ಅವಳನ್ನು ಮೋಹಿಸಿ ಮದುವೆಯಾಗಲು ಇಚ್ಛಿಸಬಹುದು; ಹೇಗಾದರೂ ಹೆಣ್ಣೊಂದು ಗೊತ್ತಾಗಿ ಮಗನ ಮದುವೆ ನಡೆದರೆ ಸಾಕು ಎಂದು ರಾಜನ ಯೋಚನೆ.

ಹುಣ್ಣಿಮೆಯ ದಿನ ಕೊಳಕಮ್ಮನ ತಂಗಿಯರಿಬ್ಬರಿಗೂ ಬಲು ಉತ್ಸಾಹ. ವನಭೋಜನಕ್ಕೆ ಇನ್ನೂ ಎಷ್ಟೋ ಹೊತ್ತಿರುವಾಗಲೆ ಅವರು ಅವಳನ್ನು ಕರೆದು, ದರ್ಪದಿಂದ, "ಎಲ್ಲಿ, ನಮ್ಮಿಬ್ಬರಿಗೂ ಬೇಗ ತಲೆಬಾಚಿ, ಜಡೆಹೆಣೆದು, ಹೂ ಮುಡಿಸಿ, ಸೀರೆಯುಡಿಸು. ರಾಜರು ಇಂದು ನಮ್ಮನ್ನು ಅಪ್ಪ ಅಮ್ಮನ ಜೊತೆಯಲ್ಲಿ ವನಭೋಜನಕ್ಕೆ ಕರೆದಿದ್ದಾರೆ" ಎಂದು ಆಜ್ಞಾಪಿಸಿದರು.

ಕೊಳಕಮ್ಮ ವಿಧಿಯಿಲ್ಲದೆ ಅವರು ಹೇಳಿದುದನ್ನೆಲ್ಲಾ ಮಾಡಿ ಅವರನ್ನು ಸಿಂಗರಿಸಿದಳು. ಆದರೆ ಎಲ್ಲಾ ಮುಗಿದ ಮೇಲೆ ಅವಳಿಗೆ ಅಳುವನ್ನು ತಡೆಯಲು ಆಗಲಿಲ್ಲ. ತಾನೂ ಆ ವನಭೋಜನಕ್ಕೆ ಹೋಗಿ ಅಲ್ಲಿ ನಡೆಯುವುದನ್ನೆಲ್ಲಾ ನೋಡಿ ನಲಿಯಬೇಕೆಂದು ಅವಳಿಗೆ ಆಸೆಯಾಯಿತು. ಕೇಳಿದರೆ ಏನೆನ್ನುವರೋ ಎಂಬ ಭಯ. ಆದರೂ ಈಗ ಹಿಂಜರಿದು ಸುಮ್ಮನಿದ್ದರೆ ಮತ್ತೆ ಇಂತಹ ಅವಕಾಶ ಲಭಿಸದಿರಬಹುದೆಂದು ಹೆದರಿ ಅವಳು ತಾನೂ ಬರುವುದಾಗಿ ಚಿಕ್ಕಮ್ಮನನ್ನು ಕೇಳಿಕೊಂಡಳು.

ಆಕೆ "ಏ ಕೊಳಕಿ, ನೀನು ಅರಮನೆಗೆ ಬರುವುದು ಎಲ್ಲಾದರೂ ಉಂಟೆ? ಉಡುವುದಕ್ಕೆ ಒಂದು ಸರಿಗೆಯ ಸೀರೆಯಿಲ್ಲ, ತೊಡುವುದಕ್ಕೆ ಒಂದು ಸರಿಯಾದ ಕುಪ್ಪಸವಿಲ್ಲ! ಒಡವೆ ಒಡ್ಯಾಣಗಳಂತೂ ಮೊದಲೇ ಇಲ್ಲ! ನೀನು ಅಲ್ಲಿಗೆ ಬಂದರೆ ನಮ್ಮ ಮಾನ ಏನಾಗಬೇಕು ಎಂಬ ಯೋಚನೆಯಾದರೂ ಬೇಡವೆ ನಿನಗೆ? ಮನೆ ಕಾದುಕೊಂಡು ಬಿದ್ದಿರು ಸುಮ್ಮನೆ!" ಎಂದುಬಿಟ್ಟಳು.

ಆದರೆ ಕೊಳಕಮ್ಮ ಬಿಡಲಿಲ್ಲ. ಮತ್ತೆ ಮತ್ತೆ ಅತ್ತು ಗೋಗರೆದು ಒಂದೇ ಸಮನಾಗಿ ಆಕೆಯನ್ನು ಪೀಡಿಸಿದಳು. ಕೊನೆಗೆ ಆಕೆ ಚೇಷ್ಟೆಗಾಗಿ, "ನೀನು ಮಾಡಿಟ್ಟಿರುವ ತಪ್ಪಲೆ ಅನ್ನವನ್ನೂ ಹಿತ್ತಲಿನಲ್ಲಿರುವ ಬೂದಿಯ ರಾಸಿಯಲ್ಲಿ ಮಿಶ್ರಮಾಡುತ್ತೇನೆ. ಇನ್ನು ಅರ್ಧಗಂಟೆಯೊಳಗೆ ಒಂದು ಅಗುಳನ್ನೂ ಬಿಡದೆ ಅದನ್ನೆಲ್ಲಾ ಆರಿಸಿ ತೆಗೆದು ಮತ್ತೆ ತಪ್ಪಲೆಗೆ ತುಂಬಿದರೆ ನೀನೂ ಅರಮನೆಗೆ ಬರಬಹುದು" ಎಂದಳು.

ಕೊಳಕಮ್ಮ "ಆರಿಸುತ್ತೇನೆ!" ಎಂದಳು.

ಅವಳ ಮಲತಾಯಿ ಅಡಿಗೆಯ ಮನೆಯ ಒಲೆಯ ಮೇಲೆ ಒಂದು ತಪ್ಪಲೆಯ ತುಂಬ ಇದ್ದ ಅನ್ನವನ್ನು ತೆಗೆದುಕೊಂಡು ಹೋಗಿ ಹಿತ್ತಲಿನಲ್ಲಿದ್ದ ಬೂದಿಯ ರಾಸಿಗೆ ಸುರಿದಳು.

ಕೊಳಕಮ್ಮ ಕೂಡಲೆ ಹಿತ್ತಲಿಗೆ ಓಡಿಹೋಗಿ ಕತ್ತೆತ್ತಿ ಸುತ್ತಲೂ ನೋಡುತ್ತ "ಹಕ್ಕಿಗಳೆ ಬನ್ನಿ; ಗೆಳೆಯರೆ ಬನ್ನಿ; ನೆರವಾಗಿ ನನಗೆ; ವಂದಿಪೆನು ನಿಮಗೆ; ಎಲ್ಲರೂ ಬನ್ನಿ; ಬನ್ನಿರೈ ಬನ್ನಿ" ಎಂದು ಮೆಲುದನಿಯಲ್ಲಿ ಹಾಡಿದಳು.

ಅವಳು ಹಾಡುತ್ತಿದ್ದಂತೆಯೇ ಎರಡು ಬಿಳಿಯ ಪಾರಿವಾಳಗಳು ಬಂದವು ಅನಂತರ ಒಂದೊಂದಾಗಿ ಆಕಾಶದಲ್ಲಿ ಹಾರಾಡುವ ಪಕ್ಷಿಗಳೆಲ್ಲಾ ಬಂದವು. ಅವು ನೇರವಾಗಿ ಬೂದಿಯ ರಾಸಿಯಿದ್ದೆಡೆಗೆ ಹಾರಿ ಸ್ವಲ್ಪವೂ ಕಾಲಹರಣ ಮಾಡದೆ ಅನ್ನದ ಅಗುಳುಗಳನ್ನು ಆರಿಸತೊಡಗಿದವು. ಅರ್ಧಗಂಟೆ ಮುಗಿಯುವ ಮೊದಲೇ ಅನ್ನವೆಲ್ಲಾ ತಪ್ಪಲೆಗೆ ಹಿಂದಿರುಗಿತ್ತು. ಹಿತ್ತಲಲ್ಲಿ ಬರಿಯ ಬೂದಿ ಉಳಿಯಿತು. ಹಕ್ಕಿಗಳು ಎತ್ತಲೋ ಚದರಿಹೋದವು.

ಕೊಳಕಮ್ಮ ಸಂತೋಷದಿಂದ ಉಬ್ಬಿ, ತಪ್ಪಲೆಯನ್ನು ಎತ್ತಿಕೊಂಡು

ಹೋಗಿ ತಾಯಿಗೆ ತೋರಿಸಿ, "ಚಿಕ್ಕಮ್ಮ, ಈಗ ನಾನೂ ಬರಬಹುದಲ್ಲವೆ ?" ಎಂದು ಕೇಳಿದಳು.

ಆಕೆ "ಏ, ಕೊಳಕಿ, ನೀನು ಅರಮನೆಗೆ ಬರುವುದು ಎಂದರೆ ಏನು? ಉಡುವುದಕ್ಕೆ ಸೀರೆಯಿಲ್ಲ, ತೊಡುವುದಕ್ಕೆ ಕುಪ್ಪಸವಿಲ್ಲ! ಆಭರಣವಿಲ್ಲ, ಅಲಂಕಾರವಿಲ್ಲ! ದೊಡ್ಡ ಮನುಷ್ಯರ ಮಧ್ಯೆ ಹೇಗೆ ನಡೆದುಕೊಳ್ಳಬೇಕು ಎನ್ನುವುದನ್ನಂತೂ ಎಂದೂ ಕಂಡಿಲ್ಲ! ಹೋಗುತ್ತಾಳಂತೆ ಇವಳು! ಬಿದ್ದಿರು ಬಾಯಿ ಮುಚ್ಚಿಕೊಂಡು!" ಎಂದುಬಿಟ್ಟಳು.

ಅನಂತರ ಕೊಳಕಮ್ಮನನ್ನು ಮನೆಯಲ್ಲಿ ಬಿಟ್ಟು ಉಳಿದವರೆಲ್ಲರೂ ಅರಮನೆಗೆ ತೆರಳಿದರು.

ಮನೆಗೆಲ್ಲಾ ತನ್ನನ್ನು ಒಬ್ಬಳನ್ನೇ ಇರಹೇಳಿ ಇತರರು ಹೊರಟು ಹೋದುದನ್ನು ಕಂಡು ಕೊಳಕಮ್ಮನಿಗೆ ಬಹಳ ಸಂಕಟವಾಯಿತು. ಅವರು ಕಣ್ಮರೆಯಾದ ಕೂಡಲೆ ಅವಳು ಹಿತ್ತಲಿನ ಮೂಲೆಯಲ್ಲಿ ತನ್ನ ತಾಯಿಯ ಸಮಾಧಿಯ ಮೇಲಿದ್ದ ಕೊಂಡಮಾವಿನ ಮರದ ಬಳಿಗೆ ಓಡಿ, ಅದರ ಕೆಳಗೆ ಕುಳಿತು, ಅತ್ತು ಗೋಳಾಡಿ, "ಕೊಂಡಮಾವಿನ ಮರವೆ, ಕೊಂಡಮಾವಿನ ಮರವೆ, ನೀನಾದರೂ ನನ್ನ ಮೇಲೆ ಕೃಪೆ ತೋರಿ ಅರಮನೆಗೆ ಹೋಗಿ ಬರಲು ಬೇಕಾಗುವ ಉಡಿಗೆ ತೊಡಿಗೆಗಳನ್ನು ದಯಪಾಲಿಸು" ಎಂದು ಬೇಡಿದಳು.

ಕೂಡಲೆ ಅವಳ ಗೆಳೆಯಗೆಳತಿಯರಾದ ಪಾರಿವಾಳಗಳು ಮರದಿಂದ ಇಳಿದು ಬಂದವು. ಅವುಗಳ ಜೊತೆಯಲ್ಲೇ ಒಂದು ಥಳಥಳಿಸುವ ರೇಷ್ಮೆಯ ಸೀರೆಯೂ ಅದಕ್ಕೊಪ್ಪುವ ಕುಪ್ಪಸವೂ, ರತ್ನಾಭರಣಗಳೂ, ಕಾಲಿಗೆ ತೊಟ್ಟು ಕೊಳ್ಳಲು ಒಂದು ಜೊತೆ ಸುಂದರವಾದ ಮಕಮಲ್ ಕೆಲಸ ಮಾಡಿದ್ದ ಜೋಡುಗಳೂ ಬಂದು ಅವಳ ತೊಡೆಯಲ್ಲಿ ಬಿದ್ದವು.

ಅವಳು ಅವನ್ನೆಲ್ಲಾ ಧರಿಸಿ ಸಾಧ್ಯವಾದಷ್ಟು ವೇಗವಾಗಿ ಅರಮನೆಯ ಉಪವನಕ್ಕೆ ಹೋದಳು. ಅಲ್ಲಿ ಯಾರಿಗೂ ಅವಳ ಗುರುತು ಸಿಕ್ಕಲಿಲ್ಲ. ಅವಳನ್ನು ನೋಡಿದವರೆಲ್ಲರೂ ಅವಳು ಯಾವುದೋ ದೇಶದ ರಾಜಕುಮಾರಿ ಇರಬೇಕೆಂದು ಊಹಿಸಿದರು. ಅವಳು ಉಟ್ಟಿದ್ದ ಬಟ್ಟೆಗಳೂ ತೊಟ್ಟಿದ್ದ ಒಡವೆಗಳೂ ಅಷ್ಟು ಸೊಗಸಾಗಿ ಅಮೂಲ್ಯವಾಗಿದ್ದವು. ಅವಳ ತಂಗಿಯರಿಗೆ ಕೂಡ ಅವಳು ಯಾರೆಂದು ಗೊತ್ತಾಗಲಿಲ್ಲ. ಅವರಿಬ್ಬರೂ ತಮ್ಮ ಅಕ್ಕ ಕೊಳಕಮ್ಮ

ಮನೆಯಲ್ಲಿ ಅಡಿಗೆಯ ಒಲೆಯ ಮುಂದೆ ಬಿದ್ದಿದ್ದಳೆಂದೇ ನಂಬಿದ್ದರು. ಅವಳು ಇಲ್ಲಿಗೆ ಬಂದಾಳೆಂಬ ಶಂಕೆಯ ಸುಳಿವು ಕೂಡ ಅವರ ಮನಸ್ಸಿನಲ್ಲಿ ಮೂಡಲಿಲ್ಲ.

ರಾಜೋದ್ಯಾನದ ಹೂಗಿಡಗಳ ಮಧ್ಯೆ ರೋಮಾಂಚಕಾರಕವಾದ ಸನ್ನಿವೇಶದಲ್ಲಿ ಬೆಳ್ದಿಂಗಳೂಟ ನಡೆಯಿತು. ರಾಜರಾಣಿಯರೂ ರಾಜಕುಮಾರನೂ ಎಲ್ಲರ ಜೊತೆಯಲ್ಲಿ ಕುಳಿತು ಭೋಜನ ಮಾಡಿದರು. ಇತರ ಹುಡುಗಿಯರೆಲ್ಲಾ ತಮ್ಮ ತಮ್ಮ ತಂದೆತಾಯಿಗಳೊಡನೆಯೋ ಗೆಳೆಯಗೆಳತಿಯರೊಡನೆಯೋ ನಲ್ಲರೊಡನೆಯೋ ಇದ್ದರು. ಯಾರ ರಕ್ಷಣೆಯೂ ಇಲ್ಲದಿದ್ದವಳೆಂದರೆ ಕೊಳಕಮ್ಮನೊಬ್ಬಳೇ. ಆದುದರಿಂದ, ರಾಜಕುಮಾರ ತಾನೇ ಅವಳನ್ನು ಬರಮಾಡಿಕೊಂಡು, ಆದರಿಸಿ, ಪಕ್ಕದಲ್ಲಿ ಕೂಡಿಸಿಕೊಂಡು, ಮೇಲಿಂದ ಮೇಲೆ ಉಪಚಾರ ಹೇಳಿ ಊಟ ಮಾಡಿಸಿದ.

ಊಟವಾದ ನಂತರ ತೋಟದಲ್ಲೆಲ್ಲಾ ಹಸುರು ಚಾಪೆ ಹಾಸಿದ್ದಂತೆ ಬೆಳೆದಿದ್ದ ಮೃದುವಾದ ಹುಲ್ಲುಗರಿಕೆಯ ಮೇಲೆ ಎಲ್ಲರೂ ತಮತಮಗೆ ಬೇಕಾದ ಸಂಗಡಿಗರೊಡನೆ ಮಾತುಕತೆಯಾಡಿಕೊಂಡು ಒಬ್ಬರನ್ನೊಬ್ಬರು ಹಾಸ್ಯಮಾಡಿಕೊಂಡು ಓಡಾಡಿದರು. ರಾಜಕುಮಾರ ಮಾತ್ರ ಕೊಳಕಮ್ಮನನ್ನು ಬಿಟ್ಟು ಕದಲಲಿಲ್ಲ.

ನಡುರಾತ್ರಿಯಾಯಿತು. ಎಲ್ಲರೂ ರಾಜರಾಣಿಯರಿಗೆ ನಮಸ್ಕರಿಸಿ, ಅವರ ಅಪ್ಪಣೆ ಪಡೆದು, ತಮ್ಮ ಮನೆಗಳಿಗೆ ತೆರಳತೊಡಗಿದರು. ಆಗ ರಾಜಕುಮಾರ ಕೊಳಕಮ್ಮನ ಕಿವಿಯಲ್ಲಿ "ಇಷ್ಟು ಹೊತ್ತಿನಲ್ಲಿ ನೀನೊಬ್ಬಳೇ ಮನೆಗೆ ನಡೆದು ಹೋಗಬೇಡ. ನಾನು ಬಿಟ್ಟುಬರುತ್ತೇನೆ" ಎಂದು ಉಸುರಿ, ಈ ವಿಚಾರವನ್ನು ತಿಳಿಸಿ ಬರುವ ಸಲುವಾಗಿ ತಾಯಿಯಿದ್ದೆಡೆಗೆ ಹೋದ. ಅವಳನ್ನು ಬಿಟ್ಟು ಬರುವ ನೆಪದಲ್ಲಿ ಅವಳ ಮನೆಯನ್ನು ಗೊತ್ತುಮಾಡಿಕೊಳ್ಳಬೇಕೆಂದು ಅವನ ಆಸೆ.

ಆದರೆ, ಅವನು ಅತ್ತ ಹೋದನೋ ಇಲ್ಲವೋ ಇವಳು ಇತ್ತ ಅಲ್ಲಿಂದ ಕಾಲುಕಿತ್ತಳು. ಅವನು ಮತ್ತೆ ಬರುವ ಹೊತ್ತಿಗೆ ಅವಳಾಗಲೆ ನೂರು ಹೆಜ್ಜೆ ಆಚೆ ಇದ್ದಳು.

ರಾಜಕುಮಾರ ತಾನು ಯಾರೆಂಬ ಅರಿವೇ ಇಲ್ಲದವನಂತೆ ಅವಳನ್ನು ಹಿಂಬಾಲಿಸಿ ಓಡಿದ. ಆದರೆ, ಅವಳು ಅವನ ಕೈಗೆ ಸಿಕ್ಕದೆ ಮನೆಯನ್ನು ಸೇರಿ ಬಾಗಿಲು ಹಾಕಿಕೊಂಡಳು. ಅವನು ಅವಳ ತಂದೆ ತಾಯಿಯರೂ ತಂಗಿಯರೂ ಹಿಂದಿರುಗಿ ಬರುವವರೆಗೂ ಬಾಗಿಲಲ್ಲೇ ನಿಂತಿದ್ದು ವನಭೋಜನದಲ್ಲಿ ಭಾಗವಹಿಸಿದ್ದ ಅಪರಿಚಿತಳಾದ ಚೆಲುವೆ ಆ ಮನೆಯನ್ನು ಹೊಕ್ಕು ಹುದುಗಿಕೊಂಡಿರುವುದಾಗಿ ಹೇಳಿದ. ಎಲ್ಲರೂ ಆಶ್ಚರ್ಯಚಕಿತರಾಗಿ ಮನೆಯಲ್ಲೆಲ್ಲಾ ಕಣ್ಣಿನಲ್ಲಿ ಕಣ್ಣಿಟ್ಟು ಹುಡುಕಾಡಿದರು. ಅಡಿಗೆಯ ಮನೆಯಲ್ಲಿ ಎಂದಿನಂತೆಯೇ ಒಲೆಯ ಮುಂದೆ ಮಲಿನವಾಗಿದ್ದ ಹಳೆಯ ಸೀರೆಯೊಂದನ್ನು ಉಟ್ಟು ಕೊಳಕಮ್ಮ ಮಲಗಿದ್ದಳು. ಅವಳ ಹೊರತು ಇನ್ನಾವ ಪ್ರಾಣಿಯೂ ಮನೆಯಲ್ಲಿರಲಿಲ್ಲ. ಅವಳು ಓಡಿ ಬಂದು ಒಳಕ್ಕೆ ನುಗ್ಗಿ ಬಾಗಿಲು ಹಾಕಿಕೊಂಡವಳು ಹಾಗೆಯೇ ಹಿತ್ತಲಿಗೆ ಹಾರಿ ತನ್ನ ಬೆಲೆ ಬಾಳುವ ವಸ್ತ್ರಾಭರಣಗಳನ್ನೆಲ್ಲಾ ಬಿಚ್ಚಿ ಕೊಂಡಮಾವಿನ ಮರದ ಬುಡದಲ್ಲಿಟ್ಟುಬಿಟ್ಟು ಮೊದಲಿನಂತೆಯೇ ಕೊಳಕಿಯಾಗಿ ಅಡಿಗೆಯ ಮನೆಯಲ್ಲಿ ಬಿದ್ದುಕೊಂಡಿದ್ದಳು. ಅವಳನ್ನು ಆ ಸ್ಥಿತಿಯಲ್ಲಿ ನೋಡಿದವರಿಗೆ ಇವಳೇ ಆ ಚೆಲುವೆಯೆಂಬ ಯೋಚನೆಯಾದರೂ ಹೇಗೆ ಹೊಳೆಯಬೇಕು ?

ರಾಜಕುಮಾರ ಚಿಂತೆಯ ಕಡಲಿನಲ್ಲಿ ಮುಳುಗಿದ. ಅವನ ಮುಖವನ್ನು ಮಂಕು ಕವಿಯಿತು. ಅವನು ಅರಮನೆಗೆ ಹಿಂದಿರುಗಿದವನು ಯಾರ ಜೊತೆಗೂ ಸೇರದೆ, ಯಾರೊಡನೆಯೂ ಮಾತಾಡದೆ, ಒಂಟಿಯಾಗಿರತೊಡಗಿ ಹುಚ್ಚನಂತಾದ.

ಒಂದು ತಿಂಗಳು ಕಳೆಯಿತು. ಮತ್ತೆ ಹುಣ್ಣಿಮೆ ಬಂದಿತು. ರಾಜರಾಣಿಯರು ಇನ್ನೊಮ್ಮೆ ಬೆಳುದಿಂಗಳಿನಲ್ಲಿ ವನಭೋಜನವನ್ನು ಏರ್ಪಡಿಸಿ, ಊರಿನ ಶ್ರೀಮಂತ ಕುಟುಂಬಗಳಿಗೆಲ್ಲಾ ಬರಬೇಕೆಂದು ಹೇಳಿಕಳುಹಿಸಿದರು. ಹಿಂದಿನ ಸಾರಿ ತಮ್ಮ ಮಗನ ಮನಸ್ಸನ್ನು ಸೂರೆಗೊಂಡ ಸುಂದರಿ ಪುನಃ ಬಂದು ಅವನನ್ನು ಆನಂದಪಡಿಸುವಂತೆ ಮಾಡಬೇಕೆಂದು ಅವರು ತಾವು ಪೂಜಿಸುತ್ತಿದ್ದ ಎಲ್ಲ ದೇವತೆಗಳನ್ನೂ ಪರಮಭಕ್ತಿಯಿಂದ ಪ್ರಾರ್ಥಿಸಿದರು.

ಸಂಜೆಯಾಗುತ್ತಿದ್ದ ಹಾಗೆಯೇ ಕೊಳಕಮ್ಮನ ತಂದೆ, ಮಲತಾಯಿ ಮತ್ತು ಮಲತಂಗಿಯರು ಮನೆಯಲ್ಲಿದ್ದ ತಮ್ಮ ತಮ್ಮ ಅತ್ಯುತ್ತಮವಾದ

ಬಟ್ಟೆಬರೆಗಳಿಂದ ಅಲಂಕರಿಸಿಕೊಂಡು ಉತ್ಸಾಹದಿಂದ ಅರಮನೆಯ ಉದ್ಯಾನ ವನಕ್ಕೆ ಹೊರಟರು. ಎಂದಿನಂತೆಯೇ ಕೊಳಕಮ್ಮನನ್ನು ತಮ್ಮ ಜೊತೆಯಲ್ಲಿ ಕರೆದುಕೊಂಡು ಹೋಗಬೇಕೆಂಬ ಆಲೋಚನೆಯಾಗಲಿ ಅಪೇಕ್ಷೆಯಾಗಲಿ ಅವರಲ್ಲಿ ಯಾರೊಬ್ಬರಿಗೂ ಬರಲಿಲ್ಲ.

ಅವರು ಬೀದಿಯ ಕೊನೆಯನ್ನು ಮುಟ್ಟುವವರೆಗೂ ಸುಮ್ಮನಿದ್ದು ಕೊಳಕಮ್ಮ ಹಿತ್ತಲಿನಲ್ಲಿದ್ದ ಕೊಂಡಮಾವಿನ ಮರದ ಬಳಿಗೆ ಓಡಿ, ಅದರ ಅಡಿಯಲ್ಲಿ ಕುಳಿತು, "ಕೊಂಡಮಾವಿನ ಮರವೆ, ಕೊಂಡಮಾವಿನ ಮರವೆ, ನೀನಾದರೂ ನನ್ನಮೇಲೆ ಕೃಪೆ ತೋರಿ ವನಭೋಜನದಲ್ಲಿ ಭಾಗವಹಿಸಲು ಬೇಕಾಗುವ ಉಡಿಗೆತೊಡಿಗೆಗಳನ್ನು ದಯಪಾಲಿಸು" ಎಂದು ಬೇಡಿದಳು.

ಕೂಡಲೆ, ಅವಳ ಪಾರಿವಾಳಗಳು ಹಿಂದಿನಸಾರಿ ತಂದಿದ್ದುದಕ್ಕಿಂತಲೂ ಹೆಚ್ಚು ಶೋಭಾಯಮಾನವಾದ ಒಡವೆ ವಸ್ತ್ರಗಳನ್ನೂ ಜೋಡುಗಳನ್ನೂ ತಂದು ಕೊಟ್ಟವು. ಕೊಳಕಮ್ಮ ಕೊಂಚವೂ ಕಾಲ ವಿಳಂಬಮಾಡದೆ, ಮೈತೊಳೆದು ಅದನ್ನು ಧರಿಸಿ, ಅಪ್ಸರೆಯಂತೆ ಚೆಲುವಿನಿಂದ ಕಳಕಳಿಸುತ್ತ ಅರಮನೆಗೆ ನಡೆದಳು. ಅವಳನ್ನು ನೋಡಿದವರೆಲ್ಲಾ ಈ ಮೋಹಿನಿ ಯಾರಿರಬಹುದೆಂದು ಬೆರಗಾದರು. ಎಷ್ಟೋ ಜನ ಓರಗೆಯ ಹೆಣ್ಣುಮಕ್ಕಳು ಇಂತಹ ಸೊಬಗು ಈ ಒಂದು ಸಂಜೆಯ ಮಾತ್ರಕ್ಕಾದರೂ ಸಾಕು—ತಮಗೂ ಬರಬಾರದೆ ಎಂದು ಮನದಲ್ಲೇ ದೇವರಿಗೆ ಮೊರೆಯಿಟ್ಟರು. ಇನ್ನು ಕೆಲವರ ಕಣ್ಣು ಅಸೂಯೆ ಯಿಂದ ಕೆಂಪಾದವು. ಇವರಲ್ಲಿ ಅವಳ ಒಲತಂಗಿಯರು ಮುಖ್ಯರೆಂದು ಹೇಳಲೇಬೇಕಾದುದಿಲ್ಲ. ಆದರೆ, ಅವಳ ಗುರುತು ಮಾತ್ರ ಯಾರಿಗೂ ಸಿಕ್ಕಲಿಲ್ಲ.

ರಾಜಕುಮಾರ ಒಂದು ತಿಂಗಳಕಾಲ ಅವಳ ದರುಶನಕ್ಕಾಗಿಯೇ ತಪಸ್ಸುಮಾಡುತ್ತಿದ್ದನಲ್ಲವೆ? ಅವನು ಅವಳನ್ನು ಕಂಡಕೂಡಲೆ ಅತ್ಯಾದರ ದಿಂದ ಸ್ವಾಗತಿಸಿ, ಅವಳ ಕೈಹಿಡಿದು ತಾನು ಕುಳಿತುಕೊಳ್ಳಲು ಗೊತ್ತಾಗಿದ್ದ ಸ್ಥಳಕ್ಕೆ ಕರೆದುಕೊಂಡು ಹೋಗಿ ಗೌರವಿಸಿದ. ಊಟವಾದ ನಂತರ ಅವಳೊಡನೆ ಉದ್ಯಾನದಲ್ಲೆಲ್ಲಾ ಅಲೆದಾಡಿದ. ಅವಳೊಡನೆ ಮಾತಾಡುವುದಕ್ಕಾಗಲಿ ಓಡಾಡುವುದಕ್ಕಾಗಲಿ ಇನ್ನಾವ ಯುವಕನಿಗೂ ಅವಕಾಶ ದೊರೆಯಲಿಲ್ಲ.

ರಾತ್ರಿ ಎಲ್ಲರೂ ತಮ್ಮ ತಮ್ಮ ಮನೆಗಳಿಗೆ ತೆರಳುವ ಸಮಯ ಬರಲು ರಾಜಕುಮಾರ ಹಿಂದಿನಸಾರಿ ಮಾಡಿದ್ದಂತೆಯೇ ಅವಳನ್ನು ಹಿಂಬಾಲಿಸಿದ. ಅವಳ ಮನೆಯನ್ನು ಕಂಡುಹಿಡಿಯಬೇಕೆಂದು ಅವನ ಹಂಬಲ. ಆದರೆ ಅವಳು ಈಸಾರಿಯೂ ಅದಕ್ಕೆ ಆಸ್ಪದಕೊಡದೆ ಅವನು ಅತ್ತಿತ್ತ ನೋಡುತ್ತಿದ್ದಾಗ ತಾನು ಮುಂದಕ್ಕೆ ಚಿಮ್ಮಿ ಮನೆಯನ್ನು ನೇರಿ ಬಾಗಿಲು ಹಾಕಿಕೊಂಡಳು. ಅವಳ ತಂದೆ ತಾಯಿಗಳು ಬರುವವರೆಗೂ ರಾಜಕುಮಾರ ಬಾಗಿಲ ಬಳಿ ನಿಂತಿದ್ದು, "ಅರಮನೆಯ ಉದ್ಯಾನವನದಲ್ಲಿ ನನ್ನೊಡನೆ ಊಟ ಮಾಡಿ ಆಟದಾಡಿದ ಹುಡುಗಿ ಈ ಮನೆಯನ್ನು ಹೊಕ್ಕು ಕಣ್ಮರೆಯಾದಳು. ಹುಡುಕಬೇಕು" ಎಂದು ಅವರಿಗೆ ತಿಳಿಸಿದ.

ಸರಿ—ಎಲ್ಲರೂ ಕೂತೂಹಲದಿಂದ ಒಂದೇ ಸಮನೆ ಹುಡುಕಿದರು. ಅಡಿಗೆಯ ಮನೆಯ ಒಲೆಯಮುಂದೆ ಮಾಸಿದ ಹಳೆಯ ಸೀರೆಯನ್ನು ಉಟ್ಟು ಮಲಗಿದ್ದ ಕೊಳಕಮ್ಮನ ಹೊರತು ಅಲ್ಲಿ ಇನ್ನಾವ ಪ್ರಾಣಿಯೂ ಇರಲಿಲ್ಲ.

ಮತ್ತೊಮ್ಮೆ ಹುಣ್ಣಿಮೆ ಬಂದಿತು. ಮೂರನೆಯ ಸಾರಿ ವನಭೋಜನವನ್ನು ನಡೆಸಿ ನೋಡಿಬಿಡಬೇಕೆಂದು ರಾಜದಂಪತಿಗಳು ನಿಶ್ಚಯಿಸಿದರು. ಏನಾದರೂಮಾಡಿ ಮಗನ ಕೊರಗನ್ನು ಕೊನೆಗಾಣಿಸಬೇಕೆಂದು ಆ ವೃದ್ಧ ಮಾತಾಪಿತೃಗಳ ಸದುದ್ದೇಶ.

ಊರಿನ ಗಣ್ಯರೆಲ್ಲಾ ಸಕುಟುಂಬ ಸಪರಿವಾರ ಸಮೇತರಾಗಿ ಹಾಜರಾಗಬೇಕೆಂದು ಕರೆ ಹೋಯಿತು. ಕೊಳಕಮ್ಮನ ತಂದೆ ತಾಯಿಗಳೂ ತಂಗಿಯರೂ ಅತಿ ಸಡಗರದಿಂದ ಸಿಂಗರಿಸಿಕೊಂಡು ಸಂಜೆಯಾಗುವುದಕ್ಕೆ ಅರೆತಾಸು ಮೊದಲೇ ಅರಮನೆಯ ತೋಟದಲ್ಲಿದ್ದರು. ಕೊಳಕಮ್ಮ ನೇರವಾಗಿ ಹಿತ್ತಲಿನ ಕೊಂಡಮಾವಿನ ಮರದ ಅಡಿಗೆ ಓಡಿ, ಅಲ್ಲಿ ಕುಳಿತು, "ಕೊಂಡಮಾವಿನ ಮರವೆ, ಕೊಂಡಮಾವಿನ ಮರವೆ, ಹೋದ ಸಾರಿ ಮಾಡಿದಂತೆಯೇ ಅನಾಥೆಯಾದ ನನಗೆ ಸಹಾಯ ನೀಡು. ಕೈಬಿಡಬೇಡ" ಎಂದು ನಮ್ರತೆಯಿಂದ ಬೇಡಿದಳು.

ಅವಳು ಹಾಗೆ ಬೇಡಿದ್ದೇ ತಡ, ಅವಳ ಶ್ರೇಯೋಭಿಲಾಷಿಗಳಾದ ಪಾರಿವಾಳಗಳು ಮರದಿಂದ ಇಳಿದು ಬಂದವು ಅವುಗಳ ಜೊತೆಯಲ್ಲೇ ಹಿಂದೆ ಎರಡು ಸಾರಿ ಬಂದಿದ್ದುದಕ್ಕಿಂತಲೂ ಹೆಚ್ಚು ಬೆಲೆಬಾಳುವ ಹೆಚ್ಚು

ಥಳಥಳಿಸುವ ವಸ್ತ್ರಾಭರಣಗಳೂ ಜೋಡುಗಳೂ ಇದ್ದ ತಟ್ಟೆಯೊಂದು ಬಂದು ಅವಳ ತೊಡೆಯ ಮೇಲೆ ಮುಂಡಿಸಿತು.

ಕೊಳಕಮ್ಮ ಅವನ್ನು ಧರಿಸಿದಾಗ ದೇವಲೋಕದಿಂದ ಆಗ ತಾನೆ ಬಂದಿದ್ದ ಸುರಸುಂದರಿಯಂತೆ ಕಂಡಳು. ಅವಳು ಅರಮನೆಯ ಉದ್ಯಾನಕ್ಕೆ ಬಂದು ಓಡಾಡತೊಡಗಿದಾಗ "ಇವಳು ಯಾರಿರಬಹುದು ?" ಎಂದು ಎಲ್ಲರೂ ಕೇಳುವವರೆ! ಎಲ್ಲರೂ ಆಶ್ಚರ್ಯಪಡುವವರೆ!

ಅವಳು ತನ್ನ ಕಣ್ಣಿಗೆ ಬಿದ್ದ ಒಡನೆಯೆ ರಾಜಕುಮಾರ ಅವಳ ಪಕ್ಕಕ್ಕೆ ಬಂದು ನಿಂತ. ಅನಂತರ ವನಭೋಜನದ ಕಲಾಪಗಳೆಲ್ಲಾ ಮುಗಿದರೂ ಕೂಡ ಅವನು ಅವಳನ್ನು ಬಿಟ್ಟು ಅತ್ತಿತ್ತ ಕದಲಲಿಲ್ಲ. ಆದಿನ ಏನಾದರೂ ಮಾಡಿ ಅವಳು ಯಾರು, ಎಲ್ಲಿಂದ ಬಂದವಳು ಎಂಬುದನ್ನು ಕಂಡುಹಿಡಿಯಲೇ ಬೇಕೆಂದು ಅವನ ನಿರ್ಧಾರ.

ನಡುರಾತ್ರಿಯ ಸುಮಾರಿಗೆ ಅತಿಥಿಗಳೆಲ್ಲಾ ತಮ್ಮ ತಮ್ಮ ಮನೆಗಳಿಗೆ ಹಿಂದಿರುಗಲಾರಂಭಿಸಿದರು. ಕೊಳಕಮ್ಮ ಎಲ್ಲರಿಗಿಂತಲೂ ಮೊದಲೇ ತೋಟವನ್ನು ಬಿಟ್ಟಳು. ರಾಜಕುಮಾರ ಯಥಾಪ್ರಕಾರ ತಾನು ಅವಳೊಡನೆ ಬರುವುದಾಗಿ ಹೇಳಿಹೊರಟ.

ದಾರಿಯಲ್ಲಿ ಕೊಳಕಮ್ಮ ಒಂದು ಕಡೆ ಥಟ್ಟನೆ ನಿಂತು ದೂರದಲ್ಲಿದ್ದ ಯಾವುದೋ ಒಂದು ವಸ್ತುವನ್ನು ಬೆರಳಿನಿಂದ ತೋರಿಸುತ್ತಾ "ಏನದು ?" ಎಂದಳು. ರಾಜಕುಮಾರ ಆ ಕಡೆ ತಿರುಗಿದ. ಕೊಳಕಮ್ಮ ಹೀಗೆ ಉಪಾಯದಿಂದ ಅವನ ಕಣ್ಣು ತಪ್ಪಿಸಿ ಓಟ ಕಿತ್ತಳು. ಓಟದ ಭರದಲ್ಲಿ ಅವಳ ಎಡಗಾಲಿನ ಜೋಡು ಸಡಿಲಿ ಕಳಚಿ ದಾರಿಯಲ್ಲಿ ಬಿತ್ತು. ಆದರೆ ಆದನ್ನು ಮತ್ತೆ ಮೆಟ್ಟಿಕೊಳ್ಳಲು ಅವಳು ಕಾಲಹರಣ ಮಾಡುವ ಹಾಗಿರಲಿಲ್ಲ. ಆದುದರಿಂದ ಅದನ್ನು ಅಲ್ಲೇ ಬಿಟ್ಟು ಮುಂದುವರಿದು ಮನೆ ಸೇರಿದಳು. ಅವಳ ಹೆಜ್ಜೆಗಳನ್ನೇ ಅನುಸರಿಸಿ ಹಿಂದೆ ಓಡಿ ಬಂದ ರಾಜಕುಮಾರನಿಗೆ ಸಿಕ್ಕಿದ್ದು ಆ ಜೋಡು ಮಾತ್ರ. ಅಷ್ಟಾದರೂ ಸಿಕ್ಕಿತಲ್ಲ!

ಮಾರನೆಯ ದಿನ ರಾಜಕುಮಾರ ತನ್ನ ತಂದೆಗೆ ಆ ಜೋಡನ್ನು ತೋರಿಸಿ, "ಅಪ್ಪ, ಯಾರ ಕಾಲಿಗೆ ಈ ಜೋಡು ಸರಿಹೋಗುತ್ತದೆಯೋ ಆ ಹುಡುಗಿಯನ್ನು ನಾನು ಮದುವೆಯಾಗುತ್ತೇನೆ" ಎಂದ.

ರಾಜ ಕೂಡಲೆ ಆಳುಗಳನ್ನು ಕರೆದು, ಹಿಂದಿನ ರಾತ್ರಿ ವನಭೋಜನಕ್ಕೆ ಬಂದಿದ್ದ ಶ್ರೀಮಂತರ ಮನೆಗಳಿಗೆಲ್ಲಾ ಆ ಜೋಡನ್ನು ತೆಗೆದುಕೊಂಡು ಹೋಗಿ, ಅದು ಯಾವ ಹುಡುಗಿಯ ಕಾಲಿಗೆ ಸರಿಹೋಗುತ್ತದೆ ಎಂಬುದನ್ನು ಕಂಡು ಹಿಡಿಯಬೇಕೆಂದು ಅಪ್ಪಣೆಮಾಡಿದ.

ಅರಮನೆಯ ಆಳುಗಳು ಜೋಡನ್ನು ಒಂದು ಪಲ್ಲಕ್ಕಿಯಲ್ಲಿಟ್ಟುಕೊಂಡು ಮನೆಯಿಂದ ಮನೆಗೆ ಅಲೆಯತೊಡಗಿದರು. ಎಷ್ಟೋ ಹೊತ್ತು ತಿರುಗಿದರೂ ಅವರಿಗೆ ಬೇಕಾದ ಬಾಲೆ ಪತ್ತೆಯಾಗಲಿಲ್ಲ ಆದರೆ ಇವರು ಹೀಗೆ ಹುಡುಕಾಡು ತ್ತಿರುವ ವರ್ತಮಾನವನ್ನು ಕೇಳಿ ಕೊಳಕಮ್ಮನ ಬಲತಂಗಿಯರಿಗೂ ಮಲ ತಾಯಿಗೂ ಪರಮಾನಂದವಾಯಿತು. ಆ ಹುಡುಗಿಯರ ಪಾದಗಳು ಮುದ್ದಾ ಗಿದ್ದವು. ಆದುದರಿಂದ ತಮ್ಮಲ್ಲಿ ಒಬ್ಬಳಿಗಾದರೂ ಆ ಜೋಡು ಸರಿಹೋಗು ವುದು ಖಂಡಿತವೆಂದು ಅವರಿಗೆ ಭರವಸೆ ಇಬ್ಬರೂ ಪಲ್ಲಕ್ಕಿ ತಮ್ಮ ಬಾಗಿಲಿಗೆ ಬರುವ ಸಮಯವನ್ನೇ ಕಾಯುತ್ತ ಕಾತರರಾದರು.

ಸ್ವಲ್ಪ ಹೊತ್ತಿನಲ್ಲೆ ಪಲ್ಲಕ್ಕಿಯೂ ಜೋಡೂ ಬಂದಿಳಿದವು. ಆಳುಗಳು ಹೊರಗಡೆ ನಿಂತು ಜೋಡನ್ನು ಮನೆಯ ಯಜಮಾನಿಯ ಕೈಗೆ ಕೊಟ್ಟರು. ಅವಳು ಅವನ್ನು ಒಳಕ್ಕೊಯ್ದು ತನ್ನ ಹಿರಿಯ ಮಗಳ ಪಾದಕ್ಕೆ ತೊಡಿಸಲು ಪ್ರಯತ್ನಿಸಿದಳು. ಆದರೆ ಅದು ಆ ಪಾದಕ್ಕೆ ತುಂಬ ಚಿಕ್ಕದಾಗಿತ್ತು ಇದನ್ನು ಕಂಡು ಆಕೆ ಒಂದು ಚಾಕುವನ್ನು ಮಗಳ ಕೈಗೆ ಕೊಟ್ಟು, "ನಿನ್ನ ಕಾಲಿನ ಹೆಬ್ಬೆರಳನ್ನು ಕತ್ತರಿಸಿಬಿಡು. ಆಗ ಜೋಡು ಸರಿಹೋಗುತ್ತದೆ. ಯೋಚಿಸ ಬೇಡ. ನೀನು ರಾಣಿಯಾದರೆ ಆಮೇಲೆ ಆ ಬೆರಳಿನ ಆವಶ್ಯಕತೆಯೇ ನಿನಗಿರು ವುದಿಲ್ಲ. ರಾಣಿ ಏನು ಇತರರಂತೆ ನೆಲದ ಮೇಲೆ ನಡೆಯಬೇಕೆ?" ಎಂದಳು.

ಆ ಹುಚ್ಚು ಹುಡುಗಿ ತಾಯಿಯ ಮಾತಿನ ಪ್ರಕಾರ ತನ್ನ ಎಡಗಾಲಿನ ಹೆಬ್ಬೆರಳನ್ನು ತರಿದು ಹಾಕಿ, ಹೇಗೋ ಕಷ್ಟದಿಂದ ಪಾದವನ್ನು ಜೋಡಿ ನೊಳಕ್ಕೆ ತೂರಿಸಿದಳು. ಸಹಿಸಲಾರದಷ್ಟು ನೋವಿದ್ದರೂ ಅವಳು ತಾನು ಸಂತೋಷದಿಂದ ತುಂಬಿ ತುಳುಕುತ್ತಿರುವಂತೆ ನಟಿಸಿದಳು.

ಜೋಡಿಗೆ ಸರಿಹೋಗುವ ಪಾದವಿದ್ದ ಹುಡುಗಿ ಸಿಕ್ಕಿದಳೆಂದು ಅರಮನೆಗೆ ಸಮಾಚಾರ ಹೋಯಿತು. ರಾಜಕುಮಾರ ಹರುಷದಿಂದ ಹಿಗ್ಗಿ ಓಡಿಬಂದು, ಅವಳೊಡನೆ ಅಂದಣವನ್ನೇರಿ ಅರಮನೆಗೆ ಹೊರಟ.

ದಾರಿಯಲ್ಲಿ ರಸ್ತೆಯ ಪಕ್ಕದಲ್ಲಿದ್ದ ಒಂದು ಮರದ ಮೇಲೆ ಎರಡು ಪುಟ್ಟ ಹಕ್ಕಿಗಳು ಕೂತಿದ್ದವು. ಅವು ಕೊಳಕಮ್ಮನ ಕೊಂಡಮಾವಿನ ಮರದಲ್ಲಿ ಗೂಡು ಕಟ್ಟಿಕೊಂಡು ವಾಸಿಸುತ್ತಿದ್ದ ಪಾರಿವಾಳಗಳು. ರಾಜಕುಮಾರನ ಪಲ್ಲಕ್ಕಿ ಮರದ ಕೆಳಗೆ ಬಂದ ಕೂಡಲೆ ಅವು "ರಾಜಕುಮಾರ, ನಿನ್ನ ಮನವನ್ನು ಒಲಿಸಿದ ಹೆಣ್ಣು ಇವಳಲ್ಲ. ಇವಳ ಪಾದವನ್ನು ಪರೀಕ್ಷಿಸು, ಗೊತ್ತಾಗುತ್ತದೆ" ಎಂದು ಒಂದೇ ಸಮನೆ ಅರಚಿದವು.

ರಾಜಕುಮಾರ ತಾನು ಕರೆತಂದಿದ್ದ ಹುಡುಗಿಯ ಪಾದವನ್ನು ಪರೀಕ್ಷಿಸಿದ. ಬೆರಳನ್ನು ಕತ್ತರಿಸಿದ್ದ ಸ್ಥಳದಲ್ಲಿ ರಕ್ತ ಧಾರೆಧಾರೆಯಾಗಿ ಹೊರಕ್ಕೆ ಹರಿಯುತ್ತಿತ್ತು. ಜೋಡು ಅವಳಿಗೆ ತುಂಬ ಚಿಕ್ಕದೆಂದು ಸ್ಪಷ್ಟವಾಯಿತು.

ಅವನು ಪಲ್ಲಕ್ಕಿಯನ್ನು ಹಿಂದಕ್ಕೆ ತಿರುಗಿಸಬೇಕೆಂದು ಆಜ್ಞಾಪಿಸಿ, ಅವಳನ್ನು ಮತ್ತೆ ಅವಳ ಮನೆಯಲ್ಲೇ ಬಿಟ್ಟ.

ಅನಂತರ ಅವಳ ತಂಗಿ ತಾನು ಆ ಜೋಡನ್ನು ಮೆಟ್ಟಿಕೊಳ್ಳಲು ಪ್ರಯತ್ನಿಸಿದಳು. ಆದರೆ ಅವಳ ಹಿಮ್ಮಡಿ ಎಷ್ಟು ಕಷ್ಟಪಟ್ಟರೂ ಒಳಕ್ಕೆ ಹೋಗಲಿಲ್ಲ. ಆಗ ಅವಳ ತಾಯಿ ಅವಳ ಪಾದವನ್ನು ಬಲವಂತವಾಗಿ ಜೋಡಿನಲ್ಲಿ ತುರುಕಿದಳು. ಇದರ ಪರಿಣಾಮವಾಗಿ ಪಾದದ ಚರ್ಮ ಕಿತ್ತು ಹೋಗಿ ರಕ್ತ ಬಂದಿತು. ಆಕೆ ಅದನ್ನು ಮನಸ್ಸಿಗೆ ತಂದುಕೊಳ್ಳದೆ ಮಗಳನ್ನು ರಾಜಕುಮಾರನ ಬಳಿಗೆ ಕರೆತಂದು ನಿಲ್ಲಿಸಿದಳು. ಅವನು ಅವಳೊಡನೆ ಪಲ್ಲಕ್ಕಿಯಲ್ಲಿ ಕುಳಿತು ಅರಮನೆಗೆ ಹೊರಟ.

ಹಾದಿಯ ಬದಿಯಲ್ಲಿ ಹಿಂದಿನ ಸಾರಿ ಕಂಡುಬಂದಿದ್ದ ಪಾರಿವಾಳಗಳು ಅದೇ ಮರದ ಮೇಲೆಯೇ ಇನ್ನೂ ಇದ್ದವು. ಪಲ್ಲಕ್ಕಿ ಹತ್ತಿರ ಬರಲು ಅವು "ರಾಜಕುಮಾರ, ನಿನ್ನ ಮನವನ್ನು ಒಲಿಸಿದ ಹೆಣ್ಣು ಇವಳಲ್ಲ. ಅವಳ ಪಾದವನ್ನು ಪರೀಕ್ಷಿಸು, ಗೊತ್ತಾಗುತ್ತದೆ" ಎಂದು ಕೂಗಿದವು.

ರಾಜಕುಮಾರ ಹುಡುಗಿಯ ಪಾದವನ್ನು ನೋಡಿದ ರಕ್ತ ಗಳಗಳನೆ ಸೋರಿ ಜೋಡೆಲ್ಲಾ ಒದ್ದೆಯಾಗಿ ಹೋಗಿತ್ತು.

ಅವನು ಖಿನ್ನನಾಗಿ, ಬಂದ ದಾರಿಯಲ್ಲೇ ಹಿಂದಿರುಗಿ, ಅವಳನ್ನು ಅವಳ ತಂದೆತಾಯಿಗಳಿಗೆ ವಾಪಸು ಒಪ್ಪಿಸಿ, "ನನ್ನ ಹೆಂಡತಿಯಾಗಬೇಕಾದವಳು

ಇವಳಲ್ಲ. ನಿಮ್ಮ ಮನೆಯಲ್ಲಿ ಇನ್ನಾರೂ ಹೆಣ್ಣುಮಕ್ಕಳಿಲ್ಲವೆ?" ಎಂದು ಕಾತರತೆಯಿಂದ ಕೇಳಿದ.

ಆ ಹುಡುಗಿಯರ ತಂದೆ "ಇಲ್ಲ. ಕೊಳಕಮ್ಮನೆಂದು ನಾವೆಲ್ಲಾ ಹೆಸರಿಟ್ಟಿರುವ ಶುದ್ಧ ಲೊಬಚಿಯೊಬ್ಬಳಿದ್ದಾಳೆ, ಅಷ್ಟೆ. ಅವಳು ನನ್ನ ಮೊದಲನೆಯ ಹೆಂಡತಿಯ ಮಗಳು. ಅವಳು ತಮ್ಮ ಹೆಂಡತಿಯಾಗಲು ಅರ್ಹಳು ಎಂದು ಊಹಿಸುವುದು ಕೂಡ ಉಚಿತವಲ್ಲ" ಎಂದ.

ರಾಜಕುಮಾರ "ಚಿಂತೆಯಿಲ್ಲ, ನೋಡಿಬಿಡೋಣ; ಅವಳನ್ನು ಕರೆದುಕೊಂಡು ಬಾ" ಎಂದ.

ಕೊಳಕಮ್ಮನ ಮಲತಾಯಿ "ಎಲ್ಲಾದರೂ ಉಂಟೆ? ಅವಳಂತಹ ಕೊಳಕಿ ತಮ್ಮ ಎದುರಿಗೆ ಬರುವುದು ಎಂದರೆ ಏನು? ನೋಡಿದರೇ ಅಸಹ್ಯವಾಗುತ್ತದೆ—ಹಾಗಿದ್ದಾಳೆ ಅವಳು" ಎಂದಳು.

ಆದರೆ ರಾಜಕುಮಾರ ಅವಳನ್ನು ತನ್ನ ಮುಂದೆ ತರಲೇಬೇಕೆಂದು ಕಟ್ಟಪ್ಪಣೆಮಾಡಿದ.

ಕೊಳಕಮ್ಮ ಕೈಕಾಲು ಮುಖಗಳನ್ನು ಚೆನ್ನಾಗಿ ತೊಳೆದುಕೊಂಡು, ಸಾಧ್ಯವಿದ್ದಷ್ಟು ಶುಭ್ರಳಾಗಿ, ರಾಜಕುಮಾರನಿದ್ದ ಕೊಠಡಿಗೆ ಬಂದು ಅವನಿಗೆ ತಲೆಬಾಗಿ ನಮಸ್ಕರಿಸಿದಳು.

ರಾಜಕುಮಾರ ಜೋಡನ್ನು ಅವಳ ಕಡೆಗೆ ನೂಕಿದ.

ಅವಳು ತನ್ನ ಪಾದವನ್ನು ಅದರಲ್ಲಿಟ್ಟಳು. ಅದು ಅವಳಿಗಾಗಿಯೇ ಅಳತೆಯಿಟ್ಟು ಹೊಲಿಯಲ್ಪಟ್ಟಿದ್ದ ಜೋಡಿನಂತೆ ಸ್ವಲ್ಪವೂ ಹೆಚ್ಚುಕಡಿಮೆಯಿಲ್ಲದೆ ಸರಿಹೋಯಿತು.

ರಾಜಕುಮಾರ ಅವಳ ಹತ್ತಿರಕ್ಕೆ ಸರಿದು ಅವಳ ಮುಖವನ್ನು ಆಸಕ್ತಿಯಿಂದ ನೋಡಿದ. ಅದು ಅವನಿಗೆ ಸುಪರಿಚಿತವಾಗಿದ್ದ ಮುಖ. ವನಭೋಜನದ ಸಮಯದಲ್ಲಿ ಅರಮನೆಯ ಉಪವನದಲ್ಲಿ ತನ್ನೊಡನೆ ಓಡಾಡಿ ತನಗೆ ಸಂತೋಷವನ್ನುಂಟುಮಾಡಿ ತನ್ನ ಹೃದಯವನ್ನು ಅಪಹರಿಸಿದ್ದ ಚೆಲುವೆ ಇವಳೇ ಎಂದು ಅವನು ಗುರುತುಹಚ್ಚಿದ. ಉತ್ಸಾಹದಿಂದ ಉಬ್ಬಿ "ಇವಳೇ ನನ್ನ ಹೆಂಡತಿಯಾಗಬೇಕಾದ ಹುಡುಗಿ! ಸಂದೇಹವಿಲ್ಲ!" ಎಂದು ಸಾರಿ, ಅವಳೊಡನೆ ಪಲ್ಲಕ್ಕಿಯನ್ನು ಪ್ರವೇಶಿಸಿ ಆನಂದದಿಂದ ಅರಮನೆಗೆ

ತೆರಳಿದ. ಇದನ್ನು ಕಂಡ ಕೊಳಕಮ್ಮನ ಮಲತಾಯಿ ಮತ್ತು ಬಲತಂಗಿಯರ ಕೆನ್ನೆಗಳು ಅಸೂಯೆಯಿಂದಲೂ ಕೋಪದಿಂದಲೂ ಬೆಳ್ಳನೆ ಬಿಳಿಚಿಕೊಂಡವು.

ದಾರಿಯ ಕರೆಯ ಮರದ ಮೇಲೆ ಪಾರಿವಾಳಗಳೆರಡೂ ತಮ್ಮ ಗೆಳತಿಯ ಬರವನ್ನೇ ನಿರೀಕ್ಷಿಸಿ ಕತ್ತೆತ್ತಿ ಮತ್ತೆ ಮತ್ತೆ ನೋಡುತ್ತಿದ್ದವು. ಪಲ್ಲಕ್ಕಿ ಮರದ ನೆರಳನ್ನು ಸೇರಿದಕೂಡಲೆ ಅವು "ರಾಜಕುಮಾರ" ಇವಳೇ ನಿನ್ನ ಹೆಂಡತಿಯಾಗಬೇಕಾದವಳು. ಇವಳನ್ನು ಕೈಬಿಡದೆ ಕಾಪಾಡು" ಎನ್ನುತ್ತ, ಹಾರಿ ಬಂದು ಕೊಳಕಮ್ಮನ ತೊಡೆಯ ಮೇಲೆ ಇಳಿದು ಕುಳಿತುಕೊಂಡು, ಅವಳೊಡನೆ ತಾವೂ ಅರಮನೆಗೆ ಪ್ರಯಾಣಮಾಡಿದವು.

ಕೊಳಕಮ್ಮನನ್ನು ಇನ್ನುಮೇಲೆ ಆ ಹೆಸರಿನಿಂದ ಕರೆಯುವುದು ಸರಿಯಲ್ಲ. ಬೇರೆ ಯಾವ ಹೆಸರಿಟ್ಟರೆ ಚೆನ್ನಾಗಿರುತ್ತೆ, ಯೋಚನೆಮಾಡಿ ಹೇಳಿ, ನೋಡೋಣ.

# ಮಾದ — ಮಾದಿ

ಮಲೆನಾಡಿನ ಮಧ್ಯೆ ದಟ್ಟವಾದ ಕಾಡಿನ ನಡುವೆ ಹಳೆಯ ಕಾಲದ ಒಂದು ಅರಮನೆಯಿತ್ತು. ಅದರಲ್ಲೊಬ್ಬ ಮಾಟಗಾತಿ ವಾಸವಾಗಿದ್ದಳು. ಆವಳಿಗೆ ಯಾವ ರೂಪವನ್ನು ಬೇಕಾದರೂ ಧರಿಸುವ ಸಾಮರ್ಥ್ಯವಿತ್ತು. ಪ್ರತಿ ದಿನವೂ ಹಗಲೆಲ್ಲಾ ಗೂಬೆಯಾಗಿಯೋ ಬೆಕ್ಕಾಗಿಯೋ ಎಲ್ಲೆಂದರಲ್ಲಿ ಸುತ್ತಾಡಿ ರಾತ್ರಿ ತಪ್ಪದೆ ಮತ್ತೆ ಮನುಷ್ಯಳಾಗುವುದು ಅವಳ ವಾಡಿಕೆ. ಯಾರಾದರೂ ಯುವಕ ಆವಳ ಅರಮನೆಗೆ ನೂರು ಹೆಜ್ಜೆ ಇವೆ ಎನ್ನುವಷ್ಟು ದೂರ ಬಂದನೆಂದರೆ ಸಾಕು, ಅವನು ಅಲ್ಲೇ ನಿಂತುಬಿಡುತ್ತಿದ್ದ. ಆನಂತರ ಅವಳು ಬಂದು ಬಿಡುಗಡೆ ಮಾಡುವವರೆಗೂ ಅವನು ಮುಂದಕ್ಕೂ ಹೋಗಲಾಗುತ್ತಿರಲಿಲ್ಲ ಹಿಂದಕ್ಕೂ ಹೋಗಲಾಗುತ್ತಿರಲಿಲ್ಲ. ಪುನಃ ಆ ಸ್ಥಳಕ್ಕೆ ಬರುವುದಿಲ್ಲವೆಂದು ಮಾತು ಕೊಟ್ಟರೆ ಮಾತ್ರ ಅವಳು ಆವನನ್ನು ಬಂಧನದಿಂದ ಬಿಡಿಸುತ್ತಿದ್ದುದು. ಒಂದುವೇಳೆ ಸುಂದರಿಯಾದ ಹುಡುಗಿ ಯಾರಾದರೂ ಅಲ್ಲಿಗೆ ಬಂದರೆ ಅವಳು ಹಕ್ಕಿಯಾಗಿಬಿಡುತ್ತಿದ್ದಳು. ಮಾಟಗಾತಿ ಆ ಹಕ್ಕಿಯನ್ನು ಒಂದು ಪಂಜರ ದಲ್ಲಿಟ್ಟು ಆ ಪಂಜರವನ್ನು ಅರಮನೆಯ ಒಂದು ಕೋಣೆಯಲ್ಲಿ ತೂಗುಹಾಕು ತ್ತಿದ್ದಳು. ಅರಮನೆಯುದ್ದಕ್ಕೂ ಬೇರೆಬೇರೆಯ ಕೋಣೆಗಳಲ್ಲಿ ಇಂತಹ ಏಳ್ನೂರು ಪಂಜರಗಳಿದ್ದವು. ಒಂದೊಂದರಲ್ಲೂ ಒಂದೊಂದು ಮುದ್ದಾದ ಹಕ್ಕಿಯಿತ್ತು.

ಆರಣ್ಯದ ಅಂಚಿನಲ್ಲಿ ಕಾಡು ಕುರುಬರ ತಂಡವೊಂದಿತ್ತು. ಅದರಲ್ಲೊಬ್ಬ ಹುಡುಗಿಯಿದ್ದಳು. ಅವಳ ಹೆಸರು ಮಾದಿ. ಅವಳಂತಹ ಚೆಲುವೆ ಅದುವರೆಗೂ ಅಲ್ಲೆಲ್ಲೂ ಹುಟ್ಟೇ ಇರಲಿಲ್ಲ. ಅವಳಿಗೆ ತಕ್ಕ ಹುಡುಗನೊಬ್ಬ ಅಲ್ಲೇ ಬೆಳೆಯು ತ್ತಿದ್ದ. ಅವನನ್ನು ಮಾದ ಎಂದು ಕರೆಯೋಣ. ಅವರಿಬ್ಬರೂ ಒಬ್ಬರ ನ್ನೊಬ್ಬರು ಬಹುವಾಗಿ ಪ್ರೀತಿಸುತ್ತಿದ್ದರು. ಇಬ್ಬರೂ ಮದುವೆಮಾಡಿಕೊಳ್ಳ

ಬೇಕೆಂದು ಮಾತಾಡಿಕೊಂಡಿದ್ದರು. ಕೆಲವು ದಿನಗಳಲ್ಲೇ ಮದುವೆ ನಡೆಯಲಿತ್ತು.

ಹೀಗಿರಲು, ಒಂದು ಸಂಜೆ ಅವರು ಗುಡಿಸಲುಗಳಿದ್ದ ಪುಟ್ಟ ಬಯಲನ್ನು ಬಿಟ್ಟು ಕಾಡಿನಲ್ಲಿ ಓಡಾಡಿಕೊಂಡು ಬರಲು ಹೋದರು. ಅಲ್ಲಾದರೆ ಬೇರೆ ಯಾರೂ ಇರುವುದಿಲ್ಲ, ತಾವಿಬ್ಬರೇ ತಮ್ಮ ಮುಂದಿನ ಬಾಳನ್ನು ಕುರಿತು ಅಡ್ಡಿ ಆತಂಕವಿಲ್ಲದೆ ಎಷ್ಟು ಬೇಕಾದರೂ ಮಾತಾಡಬಹುದೆಂದು ಅವರ ಆಸೆ. ಆದರೆ ಎಲ್ಲಿ ಅಜಾಗರೂಕತೆಯಿಂದ ಆ ಮಾಟಗಾತಿಯ ಅರಮನೆಯನ್ನು ಸಮೀಪಿಸಿಬಿಡುವೆವೋ ಎಂದು ಮಾದಿಯ ಮನಸ್ಸು ಅಂಜುತ್ತಲೇ ಇತ್ತು. ಅವಳು ಈ ವಿಷಯವನ್ನು ಆಗಾಗ ಮಾದನ ನೆನಪಿಗೆ ತರುತ್ತಲೇ ಇದ್ದಳು. ಆದರೆ ಅಂದು ಸಂಜೆ ಎಂದಿಗಿಂತಲೂ ಹಿತಕರವಾಗಿತ್ತು. ಮುಳುಗುವ ಸೂರ್ಯನ ಮಧುರವಾದ ಹೊಂಬಿಸಿಲು ಮರಗಳ ರೆಂಬೆಗಳ ಮಧ್ಯೆ ಕೆಳಗಿಳಿದು ಬಂದು ಹಸುರು ಹುಲ್ಲಿನ ಮೇಲೆ ಮನೋಹರವಾಗಿ ಹಬ್ಬಿತ್ತು. ಹೊಸ ತಳಿರಿನ ಹಚ್ಚನೆಯ ಗೂಡುಗಳಿಗೆ ಹಿಂದಿರುಗುತ್ತಿದ್ದ ಕಾಡಿನ ಹಕ್ಕಿಗಳು ವಿಧ ವಿಧವಾಗಿ ಹಾಡುತ್ತಿದ್ದವು. ಎಲ್ಲೆಲ್ಲೂ ಸಂತೋಷ ತುಂಬಿತ್ತು.

ಮಾದ ಮಾದಿಯರು ದಿಗಂತದಲ್ಲಿ ಮೆಲ್ಲಮೆಲ್ಲನೆ ಇಳಿಯುತ್ತಿದ್ದ ಸೂರ್ಯನನ್ನು ನೋಡುತ್ತ ಒಂದುಕಡೆ ಕುಳಿತರು. ಇಬ್ಬರ ಹೃದಯಗಳಲ್ಲೂ ಏನೋ ಒಂದು ದುಗುಡ ಮೂಡಿತ್ತು. ಏಕೆಂದು ಅವರಿಗೇ ಸರಿಯಾಗಿ ಗೊತ್ತಿರಲಿಲ್ಲ. ಆದರೂ ಇಷ್ಟರಲ್ಲೇ ತಮ್ಮಿಬ್ಬರಿಗೂ ಅಗಲಿಕೆ ಪ್ರಾಪ್ತವಾಗ ಬಹುದೆಂದು ಅದು ಸೂಚಿಸುತ್ತಿರುವಂತಿತ್ತು. ಇಬ್ಬರೂ ಬಹಳ ಹೊತ್ತು ಅಲ್ಲಿ ಕುಳಿತಿದ್ದು ಮನೆಗೆ ಹಿಂದಿರುಗಲು ಮೇಲಕ್ಕೆದ್ದರು. ಸೂರ್ಯ ಇನ್ನೇನು ಕಣ್ಮರೆಯಾಗುವುದರಲ್ಲಿದ್ದ. ಯಾವ ಕಡೆಯಿಂದ ನಡೆದು ಹೋಗೋಣವೆಂದು ಯೋಚಿಸುತ್ತಾ ಮಾದ ಸುತ್ತಲೂ ಒಮ್ಮೆ ತಿರುಗಿ ನೋಡಿದ. ನೋಡು ತ್ತಿದ್ದಂತೆಯೇ ಅವನ ಎದೆ ಝಲ್ಲೆಂದಿತು. ಏಕೆಂದರೆ ಅವರು ಅಷ್ಟು ಹೊತ್ತೂ ಕುಳಿತಿದ್ದ ಸ್ಥಳಕ್ಕೆ ಕೆಲವೇ ಮಾರುಗಳ ಹಿಂದೆ ಮಾಟಗಾತಿಯ ಅರಮನೆಯ ಬಿಳಿಯ ಗೋಡೆಗಳು ಬೈಗಿನ ಹೊಂಬೆಳಕಿನಲ್ಲಿ ಹೊಳೆಯುತ್ತಿದ್ದುದನ್ನು ಅವನು ಕಂಡ. ಮಾದಿ ಹೆದರುತ್ತಿದ್ದಂತೆಯೇ ಆಗಿಹೋಗಿತ್ತು. ಮಾತಿನ ಭರದಲ್ಲಿ ಮೈಮರೆತು ಅವರು ಬರಬಾರದ ಸ್ಥಳಕ್ಕೆ ಬಂದುಬಿಟ್ಟಿದ್ದರು. ಮಾದ ಎಂತಹ

ಅನರ್ಥವಾಯಿತೆಂದು ಮಮ್ಮಲ ಮರುಗಿದ, ಮುಂದೆ ಒದಗಬಹುದಾದ ಕಷ್ಟ ನಷ್ಟಗಳನ್ನು ಊಹಿಸಿಕೊಂಡು ತರತರ ನಡುಗಿದ. ಅವನ ಮುಖವೆಲ್ಲಾ ಭಯದಿಂದ ಬಿಳಿಚಿಕೊಂಡಿತು.

"ಮಾದಿ, ಎಂಥ ಕೆಲಸವಾಗಿಹೋಯಿತು!" ಎಂದು ಅವನು ಅವಳು ನಿಂತಿದ್ದ ಕಡೆಗೆ ತಿರುಗಿದ.

ಆದರೆ ಮಾದಿ ಮಾಯವಾಗಿದ್ದಳು. ಅವಳಿಗೆ ಬದಲಾಗಿ ಅಲ್ಲೊಂದು ಸೊಗಸಾದ ಗಿಣಿ ಕೂತಿತ್ತು.

ಇದ್ದಕ್ಕಿದ್ದಂತೆಯೇ ಎಲ್ಲಿಂದಲೋ ಒಂದು ಗೂಬೆ ಅಲ್ಲಿಗೆ ಬಂದಿತು. ಅದರ ಕಣ್ಣುಗಳು ಕಡು ಭಯಂಕರವಾಗಿದ್ದವು. ಅದು ಮೂರು ಸಾರಿ ಅವರಿಬ್ಬರ ಸುತ್ತಲೂ ಹಾರಿ "ಟುವ್ಹೂ! ಟುವ್ಹೂ! ಟುವ್ಹೂ!" ಎಂದು ಕೂಗಿತು. ಮಾದ ನಿಂತೆಡೆಯಿಂದ ಚಲಿಸಲು ಅಸಮರ್ಥನಾದ, ಕಲ್ಲಿನ ಪ್ರತಿಮೆಯಂತೆ ಚೈತನ್ಯರಹಿತನಾದ. ಅನಂತರ ಮಾತಾಡುವುದಾಗಲಿ, ಅಳುವುದಾಗಲಿ, ಕೈಕಾಲುಗಳನ್ನು ಅಲ್ಲಾಡಿಸುವುದಾಗಲಿ ಯಾವುದೊಂದೂ ಅವನಿಂದ ಆಗದಾಯಿತು.

ಅಷ್ಟುಹೊತ್ತಿಗೆ ಸೂರ್ಯ ಪೂರ್ತಿಯಾಗಿ ಕಾಣದಾದ. ಕತ್ತಲೆ ಕವಿಯಿತು. ಗೂಬೆ ಒಂದು ಪೊದೆಯೊಳಕ್ಕೆ ಹಾರಿಹೋಯಿತು.

ಮರುಕ್ಷಣ ಆ ಪೊದೆಯಿಂದ ಮುದುಕಿಯೊಬ್ಬಳು ಹೊರಬಿದ್ದಳು. ಅವಳೇ ಆ ಮಾಟಗಾತಿ. ಅವಳ ಮೈ ಬೆಳ್ಳಗೆ ತೆಳ್ಳಗಿತ್ತು; ಚರ್ಮ ಸುಕ್ಕಾಗಿ ಮುದುರಿದ ಕಾಗದದಂತಿತ್ತು; ಅವಳ ಕಣ್ಣುಗಳು ತಮ್ಮ ಎದುರಿಗಿರುವ ವಸ್ತುಗಳನ್ನು ದುರುಗುಟ್ಟಿಕೊಂಡು ನೋಡುತ್ತಿದ್ದವು; ಅವಳ ಮೂಗು ಉದ್ದವಾಗಿ ಗದ್ದದ ತುದಿಯವರಗೂ ಚಾಚಿಕೊಂಡಿತ್ತು.

ಅವಳು ಮೆಲ್ಲಗೆ ಏನೋ ಗೊಣಗಿಕೊಳ್ಳುತ್ತಾ ಮುಂದುವರಿದು ಗಿಣಿಯನ್ನು ಕೈಗೆ ತೆಗೆದುಕೊಂಡು ಹೊರಟುಹೋದಳು. ಮಾದ ಗಿಣಿ ತನ್ನಿಂದ ದೂರವಾಗುತ್ತಿದ್ದುದನ್ನು ಕಂಡ. ಆದರೆ ಆಗ ಅವನೇನು ಮಾಡುವಹಾಗಿದ್ದ? ನಿಂತಿದ್ದ ಕಡೆಯಿಂದ ಕದಲುವುದು ಹಾಗಿರಲಿ, ಕೂಗಿಕೊಳ್ಳುವುದು ಕೂಡ ಅವನಿಂದ ಆಗುವಂತಿರಲಿಲ್ಲ.

ಕೆಲವು ನಿಮಿಷ ಕಳೆದವು. ಮಾಟಗಾತಿ ಮತ್ತೆ ಬಂದು "ನನ್ನ ಗಿಣಿ ಪಂಜರದಲ್ಲಿ ಭದ್ರವಾಗಿದೆ. ಇನ್ನು ಭಯವಿಲ್ಲ. ನೀನು ಹೋಗಬಹುದು" ಎಂದಳು.

ತಕ್ಷಣವೇ ಮಾದನಿಗೆ ಚಲನಶಕ್ತಿ ಬಂತು. ಅವನು ಅವಳ ಪಾದಕ್ಕೆ ಬಿದ್ದು ತನ್ನ ಪ್ರಿಯೆ ಮಾದಿಯನ್ನು ಹಿಂದಕ್ಕೆ ಕೊಡಬೇಕೆಂದು ಬಗೆಬಗೆಯಾಗಿ ಬೇಡಿದ.

ಆದರೆ ಅವನು ಎಷ್ಟು ಕೇಳಿಕೊಂಡರೂ ಅವಳ ಮನಕರಗಲಿಲ್ಲ. ಗಟ್ಟಿಯಾಗಿ ಗಹಗಹಿಸಿ ನಕ್ಕು "ಇನ್ನು ನೀನು ಅವಳನ್ನು ನೋಡಲಾರೆ" ಎನ್ನುತ್ತಾ ಅವಳು ಅಲ್ಲಿ ನಿಲ್ಲದೆ ಹೊರಟುಹೋದಳು.

ಮಾದ ಅನಂತರ ಬಹಳ ಹೊತ್ತು ಅತ್ತು ಗೋಳಾಡಿದ. ಉಪಯೋಗವಾಗಲಿಲ್ಲ. "ಇನ್ನು ನನ್ನ ಗತಿ ಏನು? ಅವಳಿಲ್ಲದೆ ನಾನೊಬ್ಬನೇ ನಮ್ಮ ಹಳ್ಳಿಗೆ ಹೇಗೆ ಹೋಗಲಿ? ಹೋದರೂ ಅಲ್ಲಿ ನನ್ನ ಮನಸ್ಸಿಗೆ ನೆಮ್ಮದಿ ಎಲ್ಲಿದ್ದೀತು? ನಮ್ಮ ಬಂಧು ಬಳಗದವರಿಗೆ ಹೇಗೆ ಮುಖ ತೋರಿಸಲಿ? ಅವರಲ್ಲಿ ಯಾರಾದರೂ 'ಮಾದಿ ಎಲ್ಲಿ?' ಎಂದರೆ ಏನು ಹೇಳಲಿ?" ಎಂದು ಚಿಂತಿಸಿ, ಕಡೆಗೆ ಅವನು ತನ್ನ ಊರಿಗೆ ಹಿಂತಿರುಗುವ ಯೋಚನೆಯನ್ನೇ ತೊರೆದು, ಬೇರೊಂದು ಹಳ್ಳಿಗೆ ನಡೆದು, ಅಲ್ಲಿ ಯಾರ ಮನೆಯಲ್ಲೋ ಊಳಿಗದವನಾಗಿ ಅವರ ಕುರಿಮಂದೆಯನ್ನು ಕಾದುಕೊಂಡಿರತೊಡಗಿದ.

ಆದರೂ ಹಿಂದಿನ ನೆನಹು ಅವನನ್ನು ಬಿಟ್ಟೀತೆ? ಕುರಿ ಕಾಯುವ ನೆಪದಲ್ಲಿ ಅವನು ಅರಣ್ಯವನ್ನು ಪ್ರವೇಶಿಸಿ ಮಾಟಗಾತಿಯ ಅರಮನೆಯ ಸುತ್ತಲೂ ಅಪಾಯದ ಎಲ್ಲೆಯನ್ನು ಮೀರದಂತೆ ಸಾಧ್ಯವಾದಷ್ಟು ಹತ್ತಿರ ಸುಳಿದಾಡುತ್ತಿದ್ದ. ಆದರೆ ಎಷ್ಟು ಸಾರಿ ಸುತ್ತಿದರೂ ಮಾದಿಯ ಸುದ್ದಿಯೇ ಇರಲಿಲ್ಲ.

ಕೊನೆಗೆ ಒಂದು ರಾತ್ರಿ ಅವನಿಗೊಂದು ಕನಸಾಯಿತು. ಆ ಕನಸಿನಲ್ಲಿ ಅವನೊಂದು ಸೊಗಸಾದ ಕೆಂಪು ಹೂವನ್ನು ಕಂಡ. ಅದರ ಮಧ್ಯೆ ಒಂದು ಬೆಲೆಬಾಳುವ ಮುತ್ತು ಇತ್ತು. ಅವನು ಆ ಹೂವನ್ನು ಕಿತ್ತು ಅದನ್ನು ತನ್ನ ಕೈಯಲ್ಲಿ ಹಿಡಿದುಕೊಂಡು ಮಾಟಗಾತಿಯ ಅರಮನೆಗೆ ಹೋದ. ಅಲ್ಲಿ ಅವನು ಆ ಹೂವನ್ನು ಯಾವ ಪದಾರ್ಥಕ್ಕೆ ಸೋಕಿಸಿದರೆ ಆ ಪದಾರ್ಥ ಮಾಟದ

ಪ್ರಭಾವದಿಂದ ಬಿಡುಗಡೆ ಪಡೆಯುತ್ತಿತ್ತು. ಅಲ್ಲಿ ಅವನಿಗೆ ಮಾದಿ ಮತ್ತೆ ಸಿಕ್ಕಿದಳು.

ಮಾರನೆಯ ದಿನ ಬೆಳಗ್ಗೆ ಎದ್ದಕೂಡಲೆ ಅವನಿಗೆ ಆ ಹೂವು ಎಲ್ಲಿದೆಯೆಂದು ಪತ್ತೆಮಾಡುವುದೇ ಮುಖ್ಯ ಕೆಲಸವಾಯಿತು. ಅದನ್ನು ಹುಡುಕಿಕೊಂಡು ಬೆಟ್ಟಗಳನ್ನೇರಿ ಕಣಿವೆಗಳನ್ನಿಳಿದು ಕಾಡುಮೇಡುಗಳನ್ನೆಲ್ಲಾ ಶೋಧಿಸಿದ. ಎಂಟುದಿವಸ ಅವನ ಉದ್ದೇಶ ಕೈಗೂಡಲಿಲ್ಲ. ಒಂಬತ್ತನೆಯ ದಿನ ಸೂರ್ಯೋದಯವಾಗುವ ಸಮಯಕ್ಕೆ ಸರಿಯಾಗಿ ಆ ಹೂವು ಅವನ ಕಣ್ಣಿಗೆ ಬಿತ್ತು. ಅದರ ದಳಗಳ ನಡುವೆ ಮುತ್ತಿನಂತಹ ಒಂದು ದೊಡ್ಡ ಮಂಜಿನ ಹನಿ ಹೊಳೆಯುತ್ತಿತ್ತು. ಅವನು ಅದನ್ನು ಕಿತ್ತುಕೊಂಡು ಹಗಲೆನ್ನದೆ ಇರುಳೆನ್ನದೆ ಒಂದೇ ಸಮನೆ ನಡೆದು ಮಾದಿಯಿದ್ದ ಮಾಟಗಾತಿಯ ಅರಮನೆಗೆ ಬಂದ.

ನೂರು ಹೆಜ್ಜೆಯ ಗಡಿಯನ್ನು ದಾಟಿ ಅವನು ಅರಮನೆಯ ಬಾಗಿಲವರೆಗೂ ನೇರವಾಗಿ ನಡೆದ. ಆದರೂ ಈಗ ಅವನಿಗೆ ಏನೂ ಆಗಲಿಲ್ಲ. ಇದನ್ನು ಕಂಡು ಅವನ ಎದೆಯುಬ್ಬಿತು. ಅವನು ಬಾಗಿಲನ್ನು ಹೂವಿನಿಂದ ಮುಟ್ಟಿದ. ಅದು ತನ್ನಷ್ಟಕ್ಕೆ ತಾನೇ ತೆರೆದುಕೊಂಡಿತು. ಅವನು ಒಳಹೊಕ್ಕು ಮುಂದುವರಿಯಲು ನೂರಾರು ಹಕ್ಕಿಗಳ ಮಧುರಗಾನ ಒಮ್ಮೆಗೇ ಕೇಳಿ ಬಂತು. ಕಡೆಗೊಂದು ವಿಶಾಲವಾದ ಕೋಣೆ ಸಿಕ್ಕಿತು. ಅಲ್ಲಿ ಮಾಟಗಾತಿ ಕುಳಿತಿದ್ದಳು. ಅವಳ ಸುತ್ತಲೂ ಏಳ್ನೂರು ಪಂಜರಗಳಲ್ಲಿ ಏಳ್ನೂರು ಹಕ್ಕಿಗಳು ಹಾಡುತ್ತಿದ್ದವು.

ಮಾದನನ್ನು ನೋಡಿ ಮಾಟಗಾತಿಯ ಕೋಪ ಉಕ್ಕಿತು. ಅವಳು ತಾಳ್ಮೆಗೆಟ್ಟು ಕಿಟ್ಟನೆ ಕಿರಿಚಿದಳು. ಆದರೆ ಅವನ ಕೈಯಲ್ಲಿ ಹೂವಿದ್ದುದರಿಂದ ಅವಳ ಆಟ ಏನೂ ನಡೆಯುವಂತಿರಲಿಲ್ಲ. ಅವಳು ಅವನ ಹತ್ತಿರಕ್ಕೆ ಬರುವುದು ಕೂಡ ಆಗಲಿಲ್ಲ.

ಅವನು ಸುತ್ತಲೂ ತಿರುಗಿ ನೋಡಿದ. ಅಲ್ಲಿ ನೂರಾರು ಗಿಣಿಗಳಿದ್ದವು. ಅವುಗಳಲ್ಲಿ ಮಾದಿ ಯಾರೆಂದು ಕಂಡುಹಿಡಿಯುವುದು ಅವನಿಗೊಂದು ಸಮಸ್ಯೆಯಾಯಿತು. ಅವನು ಯೋಚಿಸುತ್ತಾ ನಿಂತಿದ್ದಾಗ ಮಾಟಗಾತಿ ಒಂದು ಪಂಜರವನ್ನು ಕೈಗೆ ತೆಗೆದುಕೊಂಡು ಬಾಗಿಲ ಕಡೆಗೆ ಓಡಿದಳು. ಅವನು

ಅವಳನ್ನು ಹಿಂಬಾಲಿಸಿ ವಾಯುವೇಗದಿಂದ ಹಾರಿ ಅವಳ ಕೈಯಲ್ಲಿದ್ದ ಪಂಜರಕ್ಕೆ ತನ್ನ ಕೈಯಲ್ಲಿದ್ದ ಹೂವನ್ನು ಸೋಕಿಸಿದ. ಮಾದಿ ಅವನ ಮುಂದೆ ಪ್ರತ್ಯಕ್ಷಳಾಗಿ ನಿಂತು, ಅವನ ಕೊರಳಿನ ಸುತ್ತಲೂ ತನ್ನ ಮೃದುವಾದ ತೋಳುಗಳನ್ನು ಬೀಸಿ ಅವನನ್ನು ತಬ್ಬಿಕೊಂಡಳು. ಅವಳ ಮುಖ ಮೊದಲಿದ್ದಂತೆಯೇ ಸೊಬಗಿನಿಂದ ಕಂಗೊಳಿಸುತ್ತಿತ್ತು.

ಆನಂತರ ಆವನು ಅಲ್ಲಿದ್ದ ಹಕ್ಕಿಗಳನ್ನೆಲ್ಲಾ ತಾನು ತಂದಿದ್ದ ಹೂವಿನಿಂದ ಮುಟ್ಟಿದ. ಪ್ರತಿ ಹಕ್ಕಿಗೂ ಅದರ ನಿಜರೂಪ ಬಂತು.

ಮಾದನೂ ಮಾದಿಯೂ ತಮ್ಮ ಊರಿಗೆ ಹಿಂತಿರುಗಿದರು. ಇಬ್ಬರಿಗೂ ಮದುವೆಯಾಯಿತು. ಆಮೇಲೆ ಅವರು ದೀರ್ಘಕಾಲ ನಿಶ್ಚಿಂತೆಯಾಗಿ ನೆಮ್ಮದಿಯಿಂದ ಬಾಳಿದರು.

ಹಾಗೆಯೇ ಮಾಟಗಾತಿಯ ಪಂಜರಗಳಲ್ಲಿ ಬಂಧಿತರಾಗಿದ್ದು ಮಾದನಿಂದ ಬಿಡುಗಡೆಹೊಂದಿದ್ದ ಎಷ್ಟೋ ಹುಡುಗಿಯರು ಅವರವರು ಒಲಿದೊಪ್ಪಿದ ಹುಡುಗರ ಕೈಹಿಡಿದು, ಸುಖವಾಗಿ ಬದುಕಿ, ದಿನವೂ ತಮ್ಮ ಉದ್ಧಾರಕನನ್ನು ನೆನೆದು ಹರಸುತ್ತಿದ್ದರು.

# ಕುಚೇಷ್ಟೆಯ ಕಿಂದರಿಜೋಗಿ

ಒಂದಾನೊಂದು ಕಾಲದಲ್ಲಿ ಒಬ್ಬ ದಾಸಯ್ಯನಿದ್ದ. ಕಿಂದರಿ ಹಿಡಿದು ಬಾರಿಸುವುದರಲ್ಲಿ ಅವನನ್ನು ಮೀರಿಸುವವರೇ ಇರಲಿಲ್ಲ. ಮನೆಮನೆಗೂ ಹೋಗಿ, ಕಿಂದರಿ ಬಾರಿಸಿ, ಭಿಕ್ಷೆಬೇಡಿ ಹೊಟ್ಟೆಹೊರೆಯುವುದು ಅವನ ವಾಡಿಕೆ.

ಒಂದುಸಾರಿ ಅವನು ಊರಿಂದೂರಿಗೆ ಸಂಚರಿಸುವಾಗ ದಾರಿಯಲ್ಲಿ ಒಂದು ದಟ್ಟವಾದ ಕಾಡನ್ನು ದಾಟಿ ಹೋಗಬೇಕಾಯಿತು. ಅವನ ಜೊತೆಯಲ್ಲಿ ಯಾರೂ ಇರಲಿಲ್ಲ. ಮುಂದೆ ಹೆಜ್ಜೆಯಿಟ್ಟಂತೆಲ್ಲಾ ಕಾಡು ಹೆಚ್ಚುಹೆಚ್ಚಾಗಿ ಗಾಢವೂ ಭಯಂಕರವೂ ಆಯಿತು. ಅಲ್ಲಿನ ನಿಶ್ಶಬ್ದತೆ ಎಂತಹ ಎದೆಗಾರನಿಗಾದರೂ ನಡುಕ ಹುಟ್ಟಿಸುತ್ತಿತ್ತು. ಆದುದರಿಂದ ಅವನು "ಎಷ್ಟು ನಡೆದರೂ ದಾರಿ ಸಾಗುವುದೇ ಇಲ್ಲ. ಜೊತೆಗೆ ಯಾರಾದರೂ ಇದ್ದಿದ್ದರೆ ಚೆನ್ನಾಗಿತ್ತು. ಬೇಸರವಾಗುತ್ತಿದೆ; ಕಿಂದರಿಯನ್ನಾದರೂ ಬಾರಿಸೋಣ" ಎಂದುಕೊಂಡು, ಅದರ ತಂತಿಗಳನ್ನು ಮೀಟತೊಡಗಿದ. ಇಂಪಾದ ನಾದ ಅರಣ್ಯವನ್ನೆಲ್ಲಾ ಆವರಿಸಿತು.

ಸ್ವಲ್ಪಹೊತ್ತಿನಲ್ಲೇ ಅವನ ಎದುರಿಗೆ ಒಂದು ತೋಳ ಬಂತು. ಅವನು "ದೇವರೆ! ಏನು ಗತಿ? ನನ್ನನ್ನು ನೋಡಲು ಒಂದು ತೋಳ ಬರುತ್ತಿದೆ!" ಎಂದು ಹೆದರಿದ.

ಆದರೆ ತೋಳ ಅವನಿಗೆ ಯಾವ ತೊಂದರೆಯನ್ನೂ ಉಂಟುಮಾಡದೆ, ಅವನ ಹತ್ತಿರಕ್ಕೆ ಬಂದು, "ದಾಸಣ್ಣ, ನೀನು ಎಷ್ಟು ಚೆನ್ನಾಗಿ ಕಿಂದರಿ ಬಾರಿಸುತ್ತೀಯ! ನನಗೂ ಹೇಳಿಕೊಡಬಾರದೆ?" ಎಂದಿತು.

ದಾಸಯ್ಯ "ಅದಕ್ಕೇನು? ನೀನು ನನ್ನ ಮಾತಿಗೆ ಮನ್ನಣೆಯಿತ್ತು ನಡೆದುಕೊಳ್ಳುವುದಾದರೆ ಆಗತ್ಯವಾಗಿ ಆಗಬಹುದು" ಎಂದ.

ತೋಳ "ನಾನು ನಿನಗೆ ವಿಧೇಯನಾದ ಶಿಷ್ಯನಾಗಿರುತ್ತೇನೆ" ಎಂದು ವಾಗ್ದಾನ ಮಾಡಿತು.

ದಾಸಯ್ಯ ತೋಳದೊಡನೆ ಮುಂದುವರಿದು, ಹಾದಿಯ ಬದಿಯಲ್ಲಿ ಇದ್ದ ಒಂದು ಮರದ ಕೆಳಗೆ ನಿಂತ. ಆ ಮರದಲ್ಲಿ ಬುಡದಿಂದ ಮೇಲೆ ಅರ್ಧ ಅಡಿ ಉದ್ದದ ಬಿರುಕು ಬಿಟ್ಟಿತ್ತು. ಅವನು "ತೋಳಣ್ಣಾ, ಇಲ್ಲಿ ನೋಡು. ನೀನು ಕಿಂದರಿ ಬಾರಿಸುವುದರಲ್ಲಿ ಪ್ರವೀಣನಾಗಲು ಅಪೇಕ್ಷೆಯಿದ್ದರೆ ನಿನ್ನ ಮುಂಗಾಲುಗಳ ಪಾದಗಳೆರಡನ್ನೂ ಈ ಬಿರುಕಿನಲ್ಲಿಡು" ಎಂದ.

ತೋಳ ಅವನು ಹೇಳಿದಂತೆ ಮಾಡಿತು.

ದಾಸಯ್ಯ ಕೂಡಲೆ ಒಂದು ಕಲ್ಲನ್ನು ತಂದು ಆ ಬಿರುಕಿನಲ್ಲಿ ಬಲವಾಗಿ ತುರುಕಿ, ತೋಳದ ಪಾದಗಳನ್ನು ಅಲ್ಲೇ ಬಂಧಿಸಿದ.

ಅನಂತರ ಅವನು "ಶಿಷ್ಯರಾಜ, ನಾನು ಮತ್ತೆ ಇತ್ತಕಡೆ ಬರುವವರೆಗೂ ಇಲ್ಲೇ ಇರು. ನೀನು ಒಳ್ಳೆಯವನು" ಎಂದು ಹೇಳಿ, ನಡೆದೇಬಿಟ್ಟ.

ಒಂದೆರಡು ತಾಸು ಹಾಗೂ ಹೀಗೂ ಸಾಗಿದವು. ಅವನು "ಎಷ್ಟು ನಡೆದರೂ ಹೊತ್ತೇ ಹೋಗುವುದಿಲ್ಲ" ಎಂದುಕೊಂಡು ಕಿಂದರಿಯನ್ನು ಬಾರಿಸ ತೊಡಗಿದ.

ಹತ್ತಿರದಲ್ಲೇ ಗಿಡಗಳ ನಡುವೆ ಒಂದು ನರಿ ಓಡಾಡುತ್ತಿತ್ತು. ಅದು ಕಿಂದರಿಯ ನಾದವನ್ನು ಕೇಳಿ ದಾಸಯ್ಯನ ಕಡೆಗೆ ಧಾವಿಸಿತು. ಅದನ್ನು ಕಂಡು ಅವನು "ಅಗೋ, ಅಲ್ಲೊಂದು ನರಿ ಬರುತ್ತಿದೆ" ಎಂದು ಯೋಚಿಸು ವಷ್ಟರಲ್ಲಿ ಅದು ಅವನನ್ನು ಸಮೀಪಿಸಿ, "ದಾಸಣ್ಣಾ, ನೀನು ಎಷ್ಟು ಚೆನ್ನಾಗಿ ಕಿಂದರಿ ಬಾರಿಸುತ್ತೀಯ! ನಾನೂ ನಿನ್ನಷ್ಟೇ ಚೆನ್ನಾಗಿ ಬಾರಿಸುವುದನ್ನು ಕಲಿಯಬೇಕು, ಕಲಿತೇ ಕಲಿಯುತ್ತೇನೆ!" ಎಂದಿತು.

ದಾಸಯ್ಯ "ಅದೇನೂ ಕಷ್ಟವಿಲ್ಲ. ನೀನು ನನ್ನ ಮಾತಿಗೆ ಮನ್ನಣೆ ಯಿತ್ತು ನಡೆದುಕೊಳ್ಳುವುದಾದರೆ ನಿಸ್ಸಂದೇಹವಾಗಿ ಕಲಿಯಬಹುದು" ಎಂದ.

ನರಿ "ಖಂಡಿತ ನಡೆದುಕೊಳ್ಳುತ್ತೇನೆ" ಎಂದು ಒಪ್ಪಿಕೊಂಡಿತು.

ನರಿಯೂ ದಾಸಯ್ಯನೂ ಸಣ್ಣದೊಂದು ಕಾಲ್ದಾರಿಗೆ ಬಂದರು. ಅದರ ಎರಡು ಕಡೆಯೂ ಪೊದೆಗಳು ಎತ್ತರವಾಗಿ ಬೆಳೆದು ನಿಂತಿದ್ದವು.

ಆಗ ದಾಸಯ್ಯ ಎಡಗಡೆಯ ಪೊದೆಯಿಂದ ಒಂದು ರೆಂಬೆಯನ್ನೂ ಬಲಗಡೆಯ ಪೊದೆಯಿಂದ ಒಂದು ರೆಂಬೆಯನ್ನೂ ನೆಲದವರೆಗೂ ಬಗ್ಗಿಸಿಕೊಂಡು ಕುಳಿತ. ಅನಂತರ ಬಲಗಡೆಯ ರೆಂಬೆಯನ್ನು ತನ್ನ ಪಾದಗಳ ಕೆಳಗೆ ತೂರಿಸಿ ಒತ್ತಿ ಹಿಡಿದುಕೊಂಡ. ಇನ್ನೊಂದನ್ನು ಕೈಯಲ್ಲೇ ಇಟ್ಟುಕೊಂಡು ನರಿಯ ಕಡೆಗೆ ತಿರುಗಿ, "ನರಿಯಣ್ಣ, ನೀನು ಕಿಂದರಿ ಬಾರಿಸುವುದರಲ್ಲಿ ಪ್ರವೀಣನಾಗಲು ಅಪೇಕ್ಷೆಯಿದ್ದರೆ, ಎಲ್ಲಿ, ನಿನ್ನ ಎಡಗಾಲನ್ನು ಇಲ್ಲಿ ಕೊಡು" ಎಂದ.

ನರಿ ತನ್ನ ಎಡಗಾಲನ್ನು ಮುಂದಕ್ಕೆ ಚಾಚಿತು.

ಅವನು ಅದನ್ನು ಎಡದ ಕಡೆಯ ರೆಂಬೆಗೆ ಬಲವಾಗಿ ಬಿಗಿದು ಕಟ್ಟಿ, "ಎಲ್ಲಿ, ಈಗ ಬಲಗಾಲನ್ನು ಕೊಡು" ಎಂದ.

ನರಿ ತನ್ನ ಬಲಗಾಲನ್ನು ಮುಂದಕ್ಕೆ ಚಾಚಿತು.

ಅವನು ಅದನ್ನು ಅಷ್ಟು ಹೊತ್ತೂ ತನ್ನ ಪಾದದ ಕೆಳಗೆ ಅದುಮಿ ಇಟ್ಟುಕೊಂಡಿದ್ದ ರೆಂಬೆಗೆ ಬಿಗಿದು ಕಟ್ಟಿದ. ಎರಡು ರೆಂಬೆಗಳೂ "ಸರ್ರ್" ಎಂದು ಮೇಲಕ್ಕೆದ್ದವು. ಅವುಗಳೊಡನೆ ನರಿಯೂ ನೆಗೆದು ಗಾಳಿಯಲ್ಲಿ ನೇತಾಡ ತೊಡಗಿತು.

ದಾಸಯ್ಯ "ಶಿಷ್ಯರಾಜ, ನಾನು ಮತ್ತೆ ಇತ್ತ ಕಡೆ ಬರುವವರೆಗೂ ಹಾಗೆಯೇ ಇರು" ಎನ್ನುತ್ತ, ಹೊರಟೇಹೋದ.

ಹತ್ತು ಹೆಜ್ಜೆ ಕಳೆಯುವಷ್ಟರಲ್ಲಿ ಮತ್ತೆ ಅವನಿಗೆ ಬೇಸರವಾಯಿತು. "ಹಾಳು ಕಾಡು, ಎಷ್ಟು ನಡೆದರೂ ಮುಗಿಯದು!" ಎನ್ನುತ್ತ ಕಿಂದರಿಯ ಮೇಲೆ ಕೈಯಾಡಿಸಿದ. ಈ ಸಾರಿ ಅದರಿಂದ ಹೊರಟ ನಾದ ಮೊದಲು ಎರಡು ಸಲ ಇದ್ದುದಕ್ಕಿಂತಲೂ ಮಧುರವಾಗಿತ್ತು. ಅದನ್ನು ಕೇಳಿ ಒಂದು ಮೊಲ ಬಿಲದಲ್ಲಿ ಇರಲಾರದೆ ಒಂದೇ ಅವಸರದಿಂದ ಓಡಿಬಂತು. ದಾಸಯ್ಯ ಅದನ್ನು ನೋಡಿ, "ಅಲ್ಲೊಂದು ಮೊಲ ಬರುತ್ತಿದೆ" ಎಂದು ಯೋಚಿಸುವಷ್ಟರಲ್ಲಿ ಅದು ಅವನ ಮುಂದೆ ನಿಂತು, "ದಾಸಣ್ಣ, ನೀನು ಎಷ್ಟು ಚೆನ್ನಾಗಿ ಕಿಂದರಿ ಬಾರಿಸುತ್ತೀಯ! ನನಗೂ ಹೇಳಿಕೊಡಬಾರದೆ?" ಎಂದಿತು.

ಅವನು "ನೀನು ನನ್ನ ಮಾತಿನಂತೆ ನಡೆಯುವುದಾದರೆ ಅಗತ್ಯವಾಗಿ ಹೇಳಿಕೊಡುತ್ತೇನೆ" ಎಂದ.

ಮೊಲ "ನೀನು ಏನು ಮಾಡು ಎಂದರೂ ಮಾಡುತ್ತೇನೆ" ಎಂದಿತು.

ದಾಸಯ್ಯ ಮೊಲವನ್ನು ಕರೆದುಕೊಂಡು ಹೊರಟ. ಅಲ್ಲಿಗೆ ಅರ್ಧ ಮೈಲಿಯ ಆಚೆ ಮರಗಳು ದೂರ ದೂರ ಬೆಳೆದು ಕಾಡು ಸ್ವಲ್ಪ ವಿರಳವಾಗಿತ್ತು. ದಾಸಯ್ಯ ಜೇಬಿನಿಂದ ಒಂದು ದಪ್ಪವಾದ ಉದ್ದವಾದ ದಾರ ತೆಗೆದು ಅದರ ಒಂದು ಕೊನೆಯನ್ನು ಮೊಲದ ಕೊರಳಿಗೂ ಇನ್ನೊಂದು ಕೊನೆಯನ್ನು ಒಂದು ಮರದ ಬುಡಕ್ಕೂ ಕಟ್ಟಿದ. ಅನಂತರ "ಮೊಲವೆ, ನಿನಗೆ ಕಿಂದರಿ ಬಾರಿಸು ವುದರಲ್ಲಿ ಪ್ರವೀಣನಾಗಬೇಕು ಎಂದು ಇಷ್ಟವಿರುವುದು ನಿಜವಾದರೆ, ಎಲ್ಲಿ, ಈ ಮರದ ಸುತ್ತಲೂ ಇಪ್ಪತ್ತು ಸಾರಿ ಓಡು" ಎಂದ.

ಮೊಲ ಏನೂ ಹೇಳದೆ, ಓಡಿತು. ಇದರ ಫಲವಾಗಿ ದಾರ ಇಪ್ಪತ್ತು ಸಾರಿ ಮರಕ್ಕೆ ಸುತ್ತಿಕೊಂಡಿತು. ಮೊಲ ಅಲ್ಲೇ ಸೆರೆಯಾಯಿತು.

ದಾಸಯ್ಯ "ಶಿಷ್ಯರಾಜ, ನಾನು ಮತ್ತೆ ಇತ್ತಕಡೆ ಬರುವವರೆಗೂ ಇಲ್ಲೇ ಇರು" ಎಂದು ಮುಂದಕ್ಕೆ ಹೊರಟೇಹೋದ.

ಇಷ್ಟು ಹೊತ್ತಿಗೆ ತೋಳ ಪೊಟರೆಯಲ್ಲಿ ಸಿಕ್ಕಿಕೊಂಡಿದ್ದ ತನ್ನ ಕಾಲು ಗಳನ್ನು ಎಳೆದು ಎಳೆದು ಬಿಡಿಸಿಕೊಂಡಿತ್ತು. ಅದರ ಕಣ್ಣುಗಳು ಕೋಪವನ್ನು ಕಾರುತ್ತಿದ್ದುವು. ಅದು "ಈಗಲೇ ಹೋಗಿ ಆ ಮೋಸಗಾರ ದಾಸಯ್ಯನನ್ನು ತಡೆದು ನಿಲ್ಲಿಸಿ ಚೂರು ಚೂರು ಮಾಡಿ ಹಾಕುತ್ತೇನೆ!" ಎಂದು ದಾಸಯ್ಯ ಹೋಗಿದ್ದ ದಿಕ್ಕಿನಲ್ಲಿ ಓಡಿತು.

ದಾರಿಯಲ್ಲಿ ನರಿ ತೋರಣದಂತೆ ನೇತಾಡುತ್ತಿತ್ತು. ಅದು "ತೋಳಣ್ಣಾ, ದಮ್ಮಯ್ಯ, ನನ್ನನ್ನು ಕೆಳಕ್ಕೆ ಬಿಡು. ಆ ಮೋಸಗಾರ ದಾಸಯ್ಯ ನನ್ನನ್ನು ಇಲ್ಲಿ ಕಟ್ಟಿಹೋಗಿದ್ದಾನೆ!" ಎಂದು ಬೇಡಿತು.

ತೋಳ ನರಿಯ ಕಾಲುಗಳನ್ನು ಬಂಧಿಸಿದ್ದ ರೆಂಬೆಗಳನ್ನು ತನ್ನ ಹಲ್ಲು ಗಳಿಂದ ಕಚ್ಚಿ, ತುಂಡುಮಾಡಿತು. ನರಿಗೆ ಮತ್ತೆ ಓಡಾಡುವ ಸ್ವಾತಂತ್ರ್ಯ ಬಂತು. ಎರಡೂ ದಾಸಯ್ಯನನ್ನು ಹುಡುಕಿಕೊಂಡು ಹೊರಟುವು.

ಮರದ ಕೆಳಗೆ ಮಂಕು ಮುಖ ಮಾಡಿಕೊಂಡು ಕೂತಿದ್ದ ಮೊಲ ದೂರ ದಿಂದಲೇ "ತೋಳಣ್ಣಾ, ನರಿಯಣ್ಣಾ, ನೋಡಿ—ನನಗೆ ಯಾವ ಗತಿ ಬಂದಿದೆ! ದಯವಿಟ್ಟು ನನ್ನನ್ನು ಬಿಡುಗಡೆ ಮಾಡಿ" ಎಂದು ಕೂಗಿಕೊಂಡಿತು.

ತೋಳ – ನರಿಗಳ ಪ್ರಯತ್ನದಿಂದ ಮೊಲಕ್ಕೆ ನೆರೆ ತಪ್ಪಿತು. ಅಲ್ಲಿಂದ ಮೂರೂ ಒಟ್ಟಿಗೆ ಶತ್ರುವಿನ ಮೇಲೆ ಸೇಡು ತೀರಿಸಿಕೊಳ್ಳಲು ಓಡಿದವು.

ಅತ್ತ, ಮುಂದು ಮುಂದಕ್ಕೆ ನಡೆಯುತ್ತಲೇ ಇದ್ದ ದಾಸಯ್ಯ ಇನ್ನೊಬ್ಬ ಶಿಷ್ಯನನ್ನು ಸಂಪಾದಿಸಿದ್ದ. ಕಾಡಿನಲ್ಲಿ ಮರ ಕಡಿಯುವುದಕ್ಕೆ ಬಂದಿದ್ದ ಹಳ್ಳಿ ಯುವನೊಬ್ಬನು ಅವನ ಸಂಗೀತಕ್ಕೆ ಸೋತು ಅವನನ್ನೇ ಹಿಂಬಾಲಿಸಿದ. ಅವನ ಹೆಗಲ ಮೇಲೆ ಮರ ಕಡಿಯುವ ಕೊಡಲಿ ಇಷ್ಟೇ ಇತ್ತು. ಕಾಡಿನ ಮಧ್ಯೆ ಮಾತಾಡಲು ಒಬ್ಬ ಮನುಷ್ಯ ಸಿಕ್ಕಿದ್ದರಿಂದ ದಾಸಯ್ಯನಿಗೆ ಸಂತೋಷ ವಾಯಿತು. ಆದುದರಿಂದ ಅವನು ಆ ಹಳ್ಳಿಯುವನನ್ನು ಯಾವ ಚೇಷ್ಟೆಗೂ ಗುರಿಪಡಿಸದೆ, ಅವನಿಗೋಸ್ಕರ ಒಂದುಕಡೆ ನಿಂತು, ತನ್ನ ವಿದ್ಯೆಯನ್ನೆಲ್ಲಾ ಉಪಯೋಗಿಸಿ ಕಿಂದರಿ ಬಾರಿಸಿದ. ದಾಸಯ್ಯನ ಹೃದಯದಲ್ಲಿ ತುಂಬಿ ತುಳುಕುತ್ತಿದ್ದ ಆನಂದವೇ ಕಿಂದರಿಯ ನಾದವಾಗಿ ಹೊರಹೊಮ್ಮುತ್ತಿದ್ದಂತೆ ತೋರುತ್ತಿತ್ತು. ಹಳ್ಳಿಯುವನಂತೂ ದಾಸಯ್ಯನ ಬೆರಳುಗಳು ತಂತಿಗಳ ಮೇಲೆ ಸರಸರನೆ ಸರಿದಾಡುವುದನ್ನೇ ದಿಟ್ಟಿಸುತ್ತಾ ಬೆಕ್ಕಸಬೆರಗಾಗಿ ನಿಂತು ಬಿಟ್ಟಿದ್ದ.

ಆಗ ತೋಳವೂ ನರಿಯೂ ಮೊಲವೂ ಮೈಮೇಲೆ ಎಚ್ಚರವೇ ಇಲ್ಲದಿರು ವಂತೆ ನುಗ್ಗಿ ಅಲ್ಲಿಗೆ ಬಂದವು. ಅವುಗಳ ಸಿಟ್ಟು ಎಷ್ಟಿದ್ದಿತೆಂದು ಮುಖ ನೋಡಿದ ಕೂಡಲೆ ಗೊತ್ತಾಗುತ್ತಿತ್ತು.

ಹಳ್ಳಿಯುವನು ಅವು ಬಂದಿದ್ದ ಉದ್ದೇಶವನ್ನು ಊಹಿಸಿ, ಹೆಗಲ ಮೇಲಿದ್ದ ಕೊಡಲಿಯನ್ನು ಕೈಗೆ ತೆಗೆದುಕೊಂಡು, ದಾಸಯ್ಯನಿಗೆ ಮರೆಯಾಗಿ ಅವನ ಮುಂದೆ ನಿಂತು, "ನನ್ನ ಕೈಯಲ್ಲಿ ಈ ಕೊಡಲಿ ಇರುವವರೆಗೂ ಯಾರೂ ಅವನಿಗೆ ತೊಂದರೆ ಮಾಡಲು ನಾನು ಅವಕಾಶ ಕೊಡುವುದಿಲ್ಲ?" ಎಂದು ಕೂಗಿದ.

ಇವನ್ನು ಕಂಡ ತೋಳ ನರಿ ಮೊಲಗಳಿಗೆ ಮೈಯೆಲ್ಲಾ ಬೆವರು ಕಿತ್ತು ಕೊಂಡು ನಡುಕ ಹುಟ್ಟಿತು. "ಇವನೆಲ್ಲಿದ್ದನೋ ಈ ರಾಕ್ಷಸ!" ಎಂದು ಕೊಂಡು ಅವು ಮೂರೂ ಹಿಂದಿರುಗಿ ಕಾಡಿನೊಳಕ್ಕೆ ಪಲಾಯನಮಾಡಿದವು.

ದಾಸಯ್ಯ ಹಳ್ಳಿಯುವನಿಗೆ ಇನ್ನಷ್ಟು ಸಂಗೀತದ ಸವಿಯನ್ನು ನೀಡಿ ಅವನನ್ನು ತಣಿಸಿ, ಮುಂದಕ್ಕೆ ಹೋದ.

# ಒಗಟಿ

ಒಂದು ಊರಿನಲ್ಲಿ ಒಬ್ಬ ರಾಜಕುಮಾರನಿದ್ದ. ಒಂದುಸಾರಿ ಇದ್ದ ಕಿದ್ದಂತೆಯೇ ಅವನಿಗೆ ಪ್ರಪಂಚದಲ್ಲೆಲ್ಲಾ ಸುತ್ತಾಡಿಕೊಂಡು ಬರಬೇಕೆಂದು ಆಶೆಯಾಯಿತು. ರಾಜಕುಮಾರನಾದವನಿಗೆ ಏನಾದರೂ ಮಾಡಬೇಕು ಎನ್ನಿಸಿದರೆ ಅವನ ಅಭಿಲಾಷೆಗೆ ಅಡ್ಡಿಬರುವವರು ಯಾರು? ಅವನು ತನ್ನೊಡನೆ ಒಬ್ಬನೇ ಒಬ್ಬ ನಂಬಿಕಸ್ತನಾದ ಸೇವಕನನ್ನು ಕರೆದುಕೊಂಡು ಹೊರಟೇಬಿಟ್ಟ.

ಒಂದು ದಿನ ಅವನು ಒಂದು ದಟ್ಟವಾದ ಕಾಡಿನಲ್ಲಿ ನಡೆಯುತ್ತಿದ್ದ. ಹಾಗೆಯೇ ಸಂಜೆಯಾಯಿತು. ರಾತ್ರಿಯನ್ನು ಎಲ್ಲಿ ಕಳೆಯಬೇಕೆಂದು ಅವನಿಗೆ ಯೋಚನೆಗಿಟ್ಟುಕೊಂಡಿತು.

ಅವನು ಅತ್ತಿತ್ತ ಕುತೂಹಲದಿಂದ ನೋಡುತ್ತಿದ್ದಾಗ ಹುಡುಗಿಯೊಬ್ಬಳು ಸಣ್ಣದೊಂದು ಮನೆಯಕಡೆಗೆ ಹೋಗುತ್ತಿರುವುದು ಕಂಡುಬಂದಿತು. ಅವನು ಅವಳನ್ನು ಸಮೀಪಿಸಿದ. ಅವಳು ಇನ್ನೂ ಚಿಕ್ಕವಳು, ಆದರೆ ಚೆಲುವೆ ಎಂದು ಗೊತ್ತಾಯಿತು. ಅವಳನ್ನು ಕುರಿತು ಅವನು "ಮಗು, ನಾನೂ ನನ್ನ ಸೇವಕನೂ ಒಂದು ರಾತ್ರಿಯ ಮಟ್ಟಿಗೆ ತಂಗಿರಲು ಆ ಮನೆಯಲ್ಲಿ ಅವಕಾಶ ದೊರೆಯುತ್ತದೆಯೆ?" ಎಂದು ಕೇಳಿದ.

ಹುಡುಗಿ "ಖಂಡಿತ ದೊರೆಯುತ್ತದೆ. ಆದರೆ ನೀವು ಅಲ್ಲಿಗೆ ಹೋಗ ದಿರುವುದೇ ಮೇಲು ಎಂದು ನನ್ನ ಅಭಿಪ್ರಾಯ" ಎಂದಳು.

ರಾಜಕುಮಾರ "ಏಕೆ?" ಎಂದ.

ಹುಡುಗಿ ನಿಟ್ಟುಸಿರು ಬಿಟ್ಟು, "ನನ್ನ ಮಲತಾಯಿ ಮಾಟಗಾತಿ. ಅಪರಿಚಿತರನ್ನು ಕಂಡರೆ ಅವಳಿಗೆ ಆಗುವುದಿಲ್ಲ" ಎಂದಳು.

ತಾನೊಬ್ಬ ಮಂತ್ರಗಾರಳ ಮನೆಗೆ ಬಂದಿರುವುದಾಗಿ ಅವನಿಗೆ ಆಗ ತಿಳಿಯಿತು. ಆದರೆ ಆಗಲೇ ಹೊತ್ತು ಮುಳುಗಿ ಕತ್ತಲೆ ಕವಿದುಕೊಂಡಿತ್ತು. ಕೆಲವು ಹೆಜ್ಜೆ ಕೂಡ ಮುಂದಕ್ಕೆ ಹೋಗಲು ಅವನಿಗೆ ಸಾಧ್ಯವಾಗುವ ಹಾಗಿರಲಿಲ್ಲ. ಆದ್ದರಿಂದ ಅವನು "ಆಪದ್ದಾಗಲಿ" ಎಂದುಕೊಂಡು ಧೈರ್ಯ ವಾಗಿ ಆ ಮನೆಯನ್ನು ಪ್ರವೇಶಿಸಿದ.

ಮುದುಕಿ ಒಂದು ಮೂಲೆಯಲ್ಲಿ ಒಲೆಯ ಮುಂದೆ ಕುಳಿತು ಬೆಂಕಿ ಕಾಯಿಸಿಕೊಳ್ಳುತ್ತಿದ್ದಳು. ರಾಜಕುಮಾರನೂ ಸೇವಕನೂ ಒಳಕ್ಕೆ ಕಾಲಿಟ್ಟ ಕೂಡಲೆ ಅವಳು ಅವರನ್ನು ಒಂದೆರಡು ನಿಮಿಷ ದುರುಗುಟ್ಟಿಕೊಂಡು ನೋಡಿ, ಅನಂತರ "ಬನ್ನಿ, ವಿಶ್ರಮಿಸಿಕೊಳ್ಳಿ" ಎಂದು ಒಲೆಯನ್ನು ಊದಿದಳು. ಅದರ ಮೇಲಿದ್ದ ಪಾತ್ರೆಯಲ್ಲಿ ಏನೋ ಬೇಯುತ್ತಿತ್ತು.

ಹುಡುಗಿ ಅವರಿಬ್ಬರಿಗೂ ಅಲ್ಲಿ ಏನನ್ನೂ ತಿನ್ನಕೂಡದೆಂದೂ ಕುಡಿಯ ಕೂಡದೆಂದೂ ಎಚ್ಚರಿಕೆ ಹೇಳಿದಳು. ಏಕೆಂದರೆ ಮುದುಕಿ ಬೇಯಿಸುತ್ತಿದ್ದುದು ಯಾವುದೋ ವಿಷದ ಪದಾರ್ಥವನ್ನು. ಆದಕಾರಣ ರಾಜಕುಮಾರನೂ ಸೇವಕನೂ ಏನೋ ಒಂದು ನೆವ ಹೇಳಿ ಉಪವಾಸ ಮಲಗಿಕೊಂಡರು. ನಡೆದು ನಡೆದು ಆಯಾಸವಾಗಿದ್ದುದರಿಂದ ಬೆಳಕು ಹರಿಯುವವರೆಗೂ ಅವರಿಗೆ ಸುಖವಾಗಿ ನಿದ್ದೆ ಬಂತು.

ಮರುದಿನ ಬೆಳಗ್ಗೆ ಅವರು ಹೊರಡಲು ಸಿದ್ಧರಾಗುತ್ತಿದ್ದರು. ರಾಜ ಕುಮಾರ ಆಗಲೇ ಕುದುರೆಯ ಮೇಲೆ ಹತ್ತಿ ಕುಳಿತಿದ್ದ. ಆಗ ಮುದುಕಿ "ಸ್ವಲ್ಪ ತಾಳಿ, ಕುಡಿಯುವುದಕ್ಕೆ ಒಂದು ಬಟ್ಟಲು ಹಾಲನ್ನಾದರೂ ತಂದು ಕೊಡುತ್ತೇನೆ" ಎಂದು ಒಳಕ್ಕೆ ಹೋದಳು.

ಅವಳು ಹಿಂದಿರುಗುವ ಹೊತ್ತಿಗೆ ರಾಜಕುಮಾರ ಅಲ್ಲಿಂದ ಹೊರಟು ಬಿಟ್ಟಿದ್ದ. ಸೇವಕ ಮಾತ್ರ ಇನ್ನೂ ತನ್ನ ಕುದುರೆಗೆ ಜೀನು ಬಿಗಿಯುತ್ತ ಒಬ್ಬನೇ ಇದ್ದ. ಅವನನ್ನು ಕಂಡು ಮುದುಕಿ "ಇಗೋ, ಇದನ್ನು ನಿನ್ನ ಒಡೆಯನಿಗೆ ತೆಗೆದುಕೊಂಡುಹೋಗಿ ಕೊಡು" ಎಂದಳು.

ಆದರೆ ಅವಳು ಮಾತಾಡುತ್ತಿದ್ದ ಹಾಗೆಯೇ ಅವಳ ಕೈಯಲ್ಲಿದ್ದ ಲೋಟ ಬಿರುಕು ಬಿಟ್ಟು ಕ್ರಮೇಣ ಛಿಪ್ರಛಿಪ್ರವಾಯಿತು. ಅದರಲ್ಲಿದ್ದ ಕೆಟ್ಟ ವಿಷ

ಕುದುರೆಯ ಮೈಮೇಲೆಲ್ಲಾ ಚಿಮ್ಮಿತು. ಅದರ ಫಲವಾಗಿ ಆ ಬಡಪ್ರಾಣಿ ತಕ್ಷಣವೇ ಅಲ್ಲೇ ಸತ್ತುಬಿತ್ತು.

ಸೇವಕ ರಾಜಕುಮಾರನನ್ನು ಹಿಂಬಾಲಿಸಿ ಓಡಿಹೋಗಿ ನಡೆದದ್ದನ್ನೆಲ್ಲಾ ಅವನಿಗೆ ತಿಳಿಸಿದ. ಇಬ್ಬರೂ ಆ ಸತ್ತ ಕುದುರೆಗೆ ಕಟ್ಟಿದ್ದ ಜೀನನ್ನಾದರೂ ಬಿಚ್ಚಿಕೊಂಡು ಹೋಗೋಣವೆಂದು ಅದು ಬಿದ್ದಿದ್ದ ಸ್ಥಳಕ್ಕೆ ಬಂದರು. ಅವರು ಬರುವ ವೇಳೆಗೆ ಒಂದು ಹದ್ದು ಕುದುರೆಯ ದೇಹದ ಮೇಲೆ ಕುಳಿತು ಅದನ್ನು ಕೊಕ್ಕಿನಿಂದ ಕುಕ್ಕಿ ಕುಕ್ಕಿ ಸುತ್ತಮುತ್ತ ಏನಾಗುತ್ತಿದೆ ಎಂಬುದರ ಅರಿವೇ ಇಲ್ಲದೆ ಮಾಂಸವನ್ನು ಕಿತ್ತುಕಿತ್ತು ತಿನ್ನುತ್ತಿತ್ತು. "ನಮಗೆ ಈ ದಿನ ಹೊಟ್ಟೆಗೆ ಇನ್ನೇನಾದರೂ ಸಿಕ್ಕುತ್ತದೆಯೋ ಇಲ್ಲವೋ, ಕೈಗೆ ಬಂದದ್ದನ್ನು ಬಿಡಬಾರದು" ಎಂದು ಯೋಚಿಸಿ ಅವರು ಆ ಹದ್ದಿಗೆ ಗುರಿಯಿಟ್ಟು ಬಾಣಬಿಟ್ಟರು. ಅದರ ಆಯಸ್ಸು ಮುಗಿಯಿತು. ಅವರು ಅದನ್ನು ಒಂದು ಚೀಲದಲ್ಲಿ ಮುಚ್ಚಿಟ್ಟುಕೊಂಡು ಮುಂದೆ ಸಾಗಿದರು. ಇವರನ್ನು ಅಟ್ಟಿಸಿಕೊಂಡು ಬಂದ ಮಾಟಗಾತಿ ಇನ್ನೊಂದು ಬಾಣಕ್ಕೆ ಗುರಿಯಾಗಿ ಯಮಲೋಕಕ್ಕೆ ತೆರಳಿದಳು.

ಆ ದಿನ ಹಗಲೆಲ್ಲಾ ಅವರು ಕಾಡಿನಲ್ಲಿ ಅಲೆದಾಡಿದರು. ಹಣ್ಣು ಹಂಪಲು ಹೇರಳವಾಗಿ ದೊರೆತದ್ದರಿಂದ ಚೀಲದಲ್ಲಿದ್ದ ಹದ್ದನ್ನು ಹೊರಕ್ಕೆ ತೆಗೆಯಬೇಕಾದ ಅಗತ್ಯವೇ ಬರಲಿಲ್ಲ. ಕೊನೆಗೆ ಮತ್ತೆ ಕತ್ತಲಾಗುವ ಹೊತ್ತಿಗೆ ಅವರು ಕಾಡಿನ ಅಂಚಿನಲ್ಲಿದ್ದ ಒಂದು ಮನೆಯನ್ನು ಸೇರಿದರು.

ಆ ಮನೆ ಕಳ್ಳರದು. ಹನ್ನೆರಡು ಜನ ಕಳ್ಳರು ಯಾರಿಗೂ ಕಾಣದ ಹಾಗೆ ಇಲ್ಲಿ ವಾಸಮಾಡಿಕೊಂಡಿದ್ದು ಸುತ್ತಮುತ್ತಣ ದೇಶದಲ್ಲೆಲ್ಲಾ ತಮ್ಮ ಪ್ರತಾಪವನ್ನು ತೋರಿಸುತ್ತಿದ್ದರು. ಅವರು ಕದ್ದು ತಂದಿದ್ದ ಸಾಮಾನುಗಳು ಮನೆಯ ತುಂಬ ಇದ್ದವು.

ರಾಜಕುಮಾರನೂ ಸೇವಕನೂ ಬಂದಾಗ ಕಳ್ಳರು ಅವರನ್ನು ಬಹು ಆದರದಿಂದ ಬರಮಾಡಿಕೊಂಡರು. ಆದರೆ ಅವರ ನಿಜವಾದ ಉದ್ದೇಶ ರಾತ್ರಿ ಇವರಿಬ್ಬರನ್ನೂ ಸಾಯಿಸಿ ಇವರ ಹತ್ತಿರ ಇದ್ದುದನ್ನೆಲ್ಲಾ ಸುಲಿಗೆ ಮಾಡಬೇಕೆಂದು.

ರಾಜಕುಮಾರ ತಾನು ತಂದಿದ್ದ ಹದ್ದನ್ನು ಕಳ್ಳರ ಯಜಮಾನನ ಕೈಗೆ ಕೊಟ್ಟು ಅದನ್ನು ರಾತ್ರಿಯ ಊಟಕ್ಕೆ ಬೇಯಿಸಬೇಕೆಂದು ಹೇಳಿದ. ಇದನ್ನು

ಕಂಡು ಕಳ್ಳರಿಗೆ ಬಹಳ ಸಂತೋಷವಾಯಿತು. ಅವರು ಅದನ್ನು ತೆಗೆದು ಕೊಂಡು ಹೋಗಿ ಅಡಿಗೆಯ ಮನೆಯಲ್ಲಿ ದುಡಿಯುತ್ತಿದ್ದ ಒಬ್ಬ ಹುಡುಗಿಗೆ ಕೊಟ್ಟು ಅದನ್ನು ಜೋಪಾನವಾಗಿ ಬೇಯಿಸಬೇಕೆಂದೂ ಸ್ವಲ್ಪವೂ ವ್ಯರ್ಥ ಮಾಡಕೂಡದೆಂದೂ ಅಪ್ಪಣೆಯಿತ್ತರು. ಈ ಹುಡುಗಿ, ಪಾಪ, ಯಾವುದೋ ದೂರದ ಊರಿನವಳು. ಕಳ್ಳರು ಅವಳನ್ನು ಎಳೆತನದಲ್ಲೇ ಕದ್ದು ತಂದು ತಮಗೆ ಚಾಕರಿ ಮಾಡಲು ಇಟ್ಟುಕೊಂಡಿದ್ದರು.

ಹದ್ದು ಬೆಂದುದು ಮುಗಿದ ಕೂಡಲೆ ಕಳ್ಳರೆಲ್ಲರೂ ಅದರ ವಾಸನೆಯಿಂದ ಆಕರ್ಷಿತರಾಗಿ ಅದನ್ನು ತಿನ್ನಲು ನಾನು ಮುಂದು ತಾನು ಮುಂದು ಎಂದು ನುಗ್ಗಿದರು. ಅವರಲ್ಲಿ ಪ್ರತಿಯೊಬ್ಬನೂ ಸಾಧ್ಯವಾದಷ್ಟು ಹೆಚ್ಚು ಭಾಗ ತನಗೇ ಬರಬೇಕೆಂದು ಪ್ರಯತ್ನಿಸಿದ. ಇದರ ಫಲವಾಗಿ ರಾಜಕುಮಾರನ ಮತ್ತು ಅವನ ಸೇವಕನ ಸರದಿ ಬರುವ ಹೊತ್ತಿಗೆ ಏನೂ ಉಳಿಯಲಿಲ್ಲ.

ಹಾಗೆ ಉಳಿಯದಿದ್ದುದು ಒಳ್ಳೆಯದೇ ಆಯಿತು. ಏಕೆಂದರೆ ಆ ಹದ್ದು ಕುದುರೆಯ ಮಾಂಸವನ್ನು ತಿಂದಿದ್ದಿತಲ್ಲವೆ ? ಆ ಕುದುರೆ ವಿಷ ತಗಲಿ ಪ್ರಾಣ ಬಿಟ್ಟಿದ್ದುದೂ ನಿಮಗೆ ನೆನಪಿರಬಹುದು. ವಿಷದ ಹನಿಗಳು ಅದರ ಮೇಲೆ ಬಿದ್ದಾಗ ಕುದುರೆಯ ಮೈಯೆಲ್ಲಾ ವಿಷಮಯವಾಗಿತ್ತು. ಆ ವಿಷಪೂರಿತವಾದ ದೇಹದಲ್ಲಿದ್ದ ಮಾಂಸವನ್ನು ಹದ್ದು ತಿನ್ನಲು ಅದೂ ವಿಷದಿಂದ ತುಂಬಿ ಹೋಯಿತು. ಈಗ ಆ ವಿಷ ಕಳ್ಳರ ಶರೀರಗಳಿಗೂ ಇಳಿದು ಅವರು ಹನ್ನೆರಡು ಜನರೂ ಒಟ್ಟಿಗೆ ಸತ್ತರು.

ಅಡಿಗೆಯ ಹುಡುಗಿಯನ್ನು ಬಿಟ್ಟರೆ ಮನೆಯಲ್ಲಿ ಇನ್ನಾರೂ ಇರಲಿಲ್ಲ. ಅವಳು ರಾಜಕುಮಾರನನ್ನು ಮನೆಯಲ್ಲಿದ್ದ ಕೋಣೆಗಳಿಗೆಲ್ಲಾ ಕರೆದುಕೊಂಡು ಹೋಗಿ ತೋರಿಸಿದಳು. ಎಲ್ಲೆಲ್ಲೂ ಬೆಲೆಬಾಳುವ ಪದಾರ್ಥಗಳು ರಾಶಿರಾಶಿ ಯಾಗಿ ಬಿದ್ದಿದ್ದವು. ಆದರೆ ಅವನು "ಇವನ್ನೆಲ್ಲಾ ನೀನೇ ತೆಗೆದುಕೊಂಡು ಇನ್ನುಮೇಲಾದರೂ ಸುಖವಾಗಿರು" ಎಂದು ಅವಳಿಗೆ ಹೇಳಿ, ಅಲ್ಲಿ ನಿಲ್ಲದೆ, ಸೇವಕನೊಡನೆ ಮುಂದಕ್ಕೆ ಪ್ರಯಾಣ ಮಾಡಿದ.

ಬಹಳ ದಿನ ಅಲ್ಲಿ ಇಲ್ಲಿ ತಿರುಗಾಡಿ ಕಡೆಗೆ ಅವರು ಒಂದು ಪಟ್ಟಣಕ್ಕೆ ಬಂದರು. ಅಲ್ಲಿ ಒಬ್ಬ ಅಸಾಧಾರಣಳಾದ ರಾಜಕುಮಾರಿಯಿದ್ದಳು. ಅವಳು ಯಾವ ಮನುಷ್ಯ ತಾನು ಬಿಡಿಸಲಾರದಂತಹ ಒಗಟಿಯೊಂದನ್ನು ತನಗೆ

ಹೇಳುವನೋ ಅವನನ್ನೇ ತಾನು ಮದುವೆಯಾಗುವುದಾಗಿ ಸಾರಿದ್ದಳು. ಬಂದವನು ಅವಳಿಗೆ ಮೂರು ದಿವಸಗಳು ಕಾಲಾವಕಾಶ ಕೊಡಬೇಕು, ಅಷ್ಟರಲ್ಲಿ ಅವಳು ಅವನ ಒಗಟಿಗೆ ಉತ್ತರ ಹೇಳಿಬಿಟ್ಟರೆ ಅವಳ ತಂದೆಯ ಕಡೆಯವರು ಅವನ ತಲೆ ಕತ್ತರಿಸಿ ಹಾಕುತ್ತಿದ್ದರು. ಅವಳು ಬಹು ಬುದ್ಧಿವಂತೆ. ಆಗಲೇ ಒಂಭತ್ತು ಜನ ತರುಣರು ಬಂದು ಅವಳನ್ನು ಪರೀಕ್ಷಿಸಿ, ಪ್ರಾಣ ಕಳೆದು ಕೊಂಡಿದ್ದರು. ಈಗ ರಾಜಕುಮಾರ ಅವಳನ್ನು ನೋಡಿ, "ನನ್ನ ಪ್ರಾಣವೂ ಹೋದರೂ ಚಿಂತೆಯಿಲ್ಲ, ಅವಳನ್ನು ಪರೀಕ್ಷಿಸಿಬಿಡಬೇಕು, ಅದೃಷ್ಟವಿದ್ದರೆ ಅವಳು ನನ್ನ ಹೆಂಡತಿಯಾಗಬಹುದು" ಎಂದು ತೀರ್ಮಾನಿಸಿದ. "ಒಂದು ಪ್ರಾಣಿಯಿತ್ತು. ಅದು ಯಾರನ್ನೂ ಕೊಲ್ಲಲಿಲ್ಲ, ಆದರೂ ಹನ್ನೆರಡು ಜನಗಳ ಜೀವ ತೆಗೆಯಿತು. ಅದು ಯಾವ ಪ್ರಾಣಿ?" ಎಂದು ಅವನು ಅವಳನ್ನು ಕೇಳಿದ ಒಗಟಿ. ರಾಜಕುಮಾರಿ ಎಷ್ಟು ಯೋಚಿಸಿದರೂ ಇದಕ್ಕೆ ಉತ್ತರ ಅವಳ ಮೆದುಳಿಗೆ ಹೊಳೆಯಲಿಲ್ಲ. ಅವಳು ತನ್ನ ಹತ್ತಿರ ಇದ್ದ ಒಗಟಿಗಳ ಪುಸ್ತಕಗಳನ್ನೆಲ್ಲಾ ತಿರುವಿಹಾಕಿದಳು, ಎಷ್ಟೆಷ್ಟೋ ತಲೆ ಕೆರೆದುಕೊಂಡಳು; ಏನೂ ಪ್ರಯೋಜನವಾಗಲಿಲ್ಲ. ಅವಳು ಸೋತಳು.

ಆದರೆ ಸೋಲನ್ನು ಒಪ್ಪಿಕೊಳ್ಳಲು ಯಾರಿಗೆ ತಾನೆ ಇಷ್ಟವಿರುತ್ತದೆ? ಆದುದರಿಂದ ರಾಜಕುಮಾರಿ ರಾತ್ರಿ ರಾಜಕುಮಾರ ಮಲಗಿದ್ದ ಕೋಣೆಗೆ ಒಬ್ಬ ಊಳಿಗದವಳನ್ನು ಕಳುಹಿಸಿ, "ಅವನು ನಿದ್ದೆಯಲ್ಲಿ ಏನಾದರೂ ಮಾತಾಡಿ ಕೊಂಡರೆ ಆ ಒಗಟಿಯನ್ನು ಬಿಡಿಸಲು ಸೂಚನೆ ಸಿಕ್ಕಬಹುದು; ಅವನು ಆಡುವ ಪ್ರತಿ ಮಾತನ್ನೂ ನೆನಪಿಟ್ಟುಕೊಂಡು ಬಂದು ನನಗೆ ತಿಳಿಸಬೇಕು" ಎಂದು ಅಪ್ಪಣೆಮಾಡಿದಳು.

ರಾಜಕುಮಾರಿಯ ಸೇವಕಿ ಮಲಗುವ ಕೋಣೆಗೆ ಹೋದಾಗ ಅಲ್ಲಿ ಹಾಸಿಗೆಯಲ್ಲಿ ಮಲಗಿದ್ದವನು ರಾಜಕುಮಾರನಲ್ಲ, ಅವನ ಸೇವಕ. ಇಂತಹುದೇನಾದರೂ ಅಪಾಯ ಒದಗೀತೆಂದು ಮೊದಲೇ ಊಹಿಸಿ ಆ ಸೇವಕ ತಾನು ರಾಜಕುಮಾರನ ಸ್ಥಳದಲ್ಲಿ ಮಲಗಿದ್ದ. ರಾಜಕುಮಾರ ಯಾರೂ ಕಾಣದ ಕಡೆ ಇನ್ನೆಲ್ಲೋ ಬೆಚ್ಚಗೆ ನಿಶ್ಚಿಂತನಾಗಿ ನಿದ್ದೆಹೋಗುತ್ತಿದ್ದ.

ಸೇವಕಿ ಸದ್ದು ಮಾಡದೆ ಕೋಣೆಯೊಳಕ್ಕೆ ಕಾಲಿಟ್ಟಳು. ಆದರೆ ಎಚ್ಚರವಾಗಿಯೇ ಇದ್ದ ರಾಜಕುಮಾರನ ಸೇವಕನಿಗೆ ಅವಳ ಬರವು ಗೊತ್ತಾಯಿತು.

ಅವಳು ತಾನು ಯಾರೆಂದು ಇತರರಿಗೆ ಗುರುತು ಸಿಕ್ಕದಿರಲೆಂದು ಮುಖಕ್ಕೆ ಒಂದು ಪರದೆ ಹಾಕಿಕೊಂಡಿದ್ದಳು. ಸೇವಕ ಧಿಗ್ಗನೆ ಮೇಲಕ್ಕೆದ್ದು ಆ ಪರದೆಯನ್ನು ಕಿತ್ತಿಟ್ಟುಕೊಂಡು ಅವಳನ್ನು ಹೊರಕ್ಕೆ ಓಡಿಸಿದ.

ಎರಡನೆಯ ದಿನ ರಾತ್ರಿ ರಾಜಕುಮಾರಿ ಬೇರೊಬ್ಬ ಹೆಂಗಸನ್ನು ರಾಜಕುಮಾರನ ಕೋಣೆಯೊಳಕ್ಕೆ ಕಳುಹಿಸಿದಳು. ಇವಳಿಗೂ ಮೊದಲನೆಯವಳಿಗೆ ಆದ ಗತಿಯೇ ಆಯಿತು.

ಮೂರನೆಯ ದಿವಸ ರಾಜಕುಮಾರನೇ ಕೋಣೆಯಲ್ಲಿ ಮಲಗಿದ್ದ. ಹಿಂದಿನ ಎರಡು ರಾತ್ರಿಗಳು ನಡೆದಿದ್ದ ಸಂಗತಿಗಳನ್ನೆಲ್ಲಾ ಅವನು ಸೇವಕನಿಂದ ತಿಳಿದುಕೊಂಡು, "ಇನ್ನು ಯಾರೂ ಬರಲಾರರು; ಇನ್ನು ನನಗೆ ಭಯವಿಲ್ಲ" ಎಂದು ಹಾಸಿಗೆಯಲ್ಲಿ ತಾನೇ ಒರಗಿದ್ದ.

ಆ ದಿನ ರಾಜಕುಮಾರಿಯೇ ಬಂದಳು. ಅವಳೂ ಮುಖಪರದೆ ಧರಿಸಿದ್ದಳು. ಬಂದವಳೇ ಅವಳು ಅವನ ಮಂಚದ ಪಕ್ಕದಲ್ಲಿ ಕುಳಿತು ಅವನನ್ನು ಮಾತಾಡಿಸತೊಡಗಿದಳು. "ನಿದ್ದೆಯ ಜೋಂಪಿನಲ್ಲಿ ಏನು ಕೇಳಿದರೂ ಹೇಳಿಬಿಡುತ್ತಾನೆ; ಇವನನ್ನು ಸುಲಭವಾಗಿ ಮೋಸಪಡಿಸಬಹುದು" ಎಂದು ಅವಳ ಊಹೆ. ಆದರೆ ಅವನು ಎಚ್ಚರವಾಗಿಯೇ ಇದ್ದ. ಅವಳ ಪ್ರಶ್ನೆಗಳಲ್ಲಿ ಪ್ರತಿಯೊಂದೂ ಅವನಿಗೆ ಅರ್ಥವಾಯಿತು.

ಅವಳು "ಒಂದು ಪ್ರಾಣಿಯಿತ್ತು. ಅದು ಯಾರನ್ನೂ ಕೊಲ್ಲಲಿಲ್ಲ; ಯಾವುದು ಆ ಪ್ರಾಣಿ?" ಎಂದಳು.

ಅವನು "ವಿಷವೇರಿದ್ದ ಕುದುರೆಯ ಮಾಂಸವನ್ನು ತಿಂದು ಸತ್ತುಹೋದ ಒಂದು ಹದ್ದು" ಎಂದ.

ಅವಳು "ಆದರೂ ಅದು ಹನ್ನೆರಡು ಜನಗಳ ಜೀವ ತೆಗೆಯಿತು. ಹಾಗೆಂದರೇನು?" ಎಂದಳು.

ಅವನು "ಹನ್ನೆರಡು ಜನ ಕಳ್ಳರು ವಿಷಪೂರಿತವಾಗಿದ್ದ ಆ ಹದ್ದನ್ನು ತಿಂದರು. ಅವರೂ ಸತ್ತರು" ಎಂದ.

ಅವನು ಕೇಳಿದ್ದ ಒಗಟಿಗೆ ಉತ್ತರ ಸಿಕ್ಕಿತು. ಅವಳು ಅಲ್ಲಿಂದ ಹೊರಡಲು ಎದ್ದಳು. ಆದರೆ ಅವನು ಬಿಡುವನೆ? ಅವಳ ಮುಖಪರದೆಯನ್ನು

ಹಿಡಿದುಕೊಂಡ. ಅವಳು ಅದನ್ನು ಅವನ ಕೈಯಲ್ಲೇ ಬಿಟ್ಟು ಓಡಿಹೋಗ ಬೇಕಾಯಿತು.

ಮಾರನೆಯ ದಿವಸ ರಾಜಕುಮಾರಿ ತಾನು ಒಗಟಿಗೆ ಉತ್ತರವನ್ನು ಕಂಡುಹಿಡಿದಿರುವುದಾಗಿ ಪ್ರಕಟಿಸಿದಳು. ತೀರ್ಪುಗಾರರು ಬಂದು ಸೇರಿ ಅವಳು ಹೇಳಿದ್ದನ್ನೆಲ್ಲಾ ಕೇಳಿ ಅವಳೇ ಗೆದ್ದಳು ಎಂದರು. ಆದರೆ ರಾಜ ಕುಮಾರ ಅಲ್ಲೇ ಇದ್ದ. ಅವನು "ಆಕೆ ನಿನ್ನೆ ರಾತ್ರಿ ನನ್ನ ಬಳಿಗೆ ಬಂದು ಬೇಡಿಕೊಂಡಳು. ನಾನೇ 'ಪಾಪ, ಹುಡುಗಿ, ಹೋಗಲಿ' ಎಂದು ನನ್ನ ಒಗಟಿಗೆ ಉತ್ತರ ಹೇಳಿ ಕಳುಹಿಸಿದೆ. ಇಲ್ಲದಿದ್ದರೆ ಅದನ್ನು ಬಿಡಿಸಲು ಅವಳು ತಲೆಕೆಳಗಾಗಿ ನಿಂತು ನಾಲ್ಕು ವರ್ಷ ತಪಸ್ಸು ಮಾಡಿದ್ದರೂ ಆಗುತ್ತಿರಲಿಲ್ಲ" ಎಂದ.

ತೀರ್ಪುಗಾರರು "ನೀನೇ ಹೇಳಿಕೊಟ್ಟೆ ಎನ್ನುವುದಕ್ಕೆ ಸಾಕ್ಷಿ ಏನು?" ಎಂದರು.

ರಾಜಕುಮಾರ ತನ್ನ ಸೇವಕನೂ ತಾನೂ ಒಂದಾಗುತ್ತಲೊಂದರಂತೆ ಕತ್ತರಿಸಿಟ್ಟುಕೊಂಡಿದ್ದ ಮುಖಪರದೆಗಳನ್ನು ಹೊರಕ್ಕೆ ತೆಗೆದು ತೋರಿಸಿದ. ಅಲ್ಲಿದ್ದವರೆಲ್ಲಾ ರಾಜಕುಮಾರಿಯ ಮುಖಪರದೆಯನ್ನು ನೋಡಿದ ಕೂಡಲೆ ಗುರುತಿಸಿದರು.

ಇನ್ನೇನಾಗಬೇಕು? ಮದುವೆಯ ಏರ್ಪಾಟುಗಳು ಅಂದೇ ಆರಂಭ ವಾಗಲೆಂದು ತೀರ್ಪುಗಾರರು ಆಜ್ಞಾಪಿಸಿದರು.

# ಪಾರಿಜಾತ

ಒಂದಾನೊಂದು ಕಾಲದಲ್ಲಿ ಒಬ್ಬ ರಾಣಿಯಿದ್ದಳು. ಅವಳಿಗೆ ಮಕ್ಕಳಿರಲಿಲ್ಲ. ಆದ್ದರಿಂದ ಪ್ರತಿದಿನವೂ ಬೆಳಗ್ಗೆ ಎದ್ದಕೂಡಲೆ ಅವಳು ಅರಮನೆಯ ಹಿಂದುಗಡೆ ಇದ್ದ ಹೂದೋಟಕ್ಕೆ ಹೋಗಿ, ಒಬ್ಬಳೇ ಕುಳಿತು, ತನಗೊಂದು ಮಗುವನ್ನು ಕರುಣಿಸಬೇಕೆಂದು ದೇವರನ್ನು ಬೇಡುತ್ತಿದ್ದಳು.

ಒಂದು ದಿನ ಒಬ್ಬ ದೇವತೆ ಅವಳ ಬಳಿಗೆ ಇಳಿದು ಬಂದು, "ರಾಣಿಯೆ, ನಿಶ್ಚಿಂತೆಯಾಗಿರು. ನಿನಗೊಬ್ಬ ಮಗ ಹುಟ್ಟುತ್ತಾನೆ. ಅವನು ಏನಾಗಬೇಕು ಎಂದು ಅಪೇಕ್ಷೆಪಟ್ಟರೆ ಅದು ಆಗಿಯೇಹೋಗುತ್ತದೆ. ಈ ಶಕ್ತಿಯನ್ನು ಉಪಯೋಗಿಸಿ ಅವನು ಜಗತ್ತಿನಲ್ಲಿ ಏನುಬೇಕಾದರೂ ಪಡೆಯಬಹುದು" ಎಂದ.

ರಾಣಿ ತಕ್ಷಣ ಓಡಿ ಹೋಗಿ ಈ ಶುಭ ಸಮಾಚಾರವನ್ನು ರಾಜನಿಗೆ ತಿಳಿಸಿದಳು. ಅಂದಿಗೆ ಒಂದು ವರುಷಕ್ಕೆ ಸರಿಯಾಗಿ ಅವಳು ಒಬ್ಬ ಮಗನನ್ನು ಹೆತ್ತಳು. ರಾಜನ ಸಂತೋಷಕ್ಕೆ ಪಾರವೇ ಇರಲಿಲ್ಲ.

ಪ್ರತಿ ದಿವಸವೂ ರಾಣಿ ಮಗುವನ್ನು ತೋಟಕ್ಕೆ ಎತ್ತಿಕೊಂಡು ಹೋಗಿ ಅಲ್ಲಿ ಅದನ್ನು ಆಡಿಸುತ್ತ ಬಹಳ ಹೊತ್ತು ಕೂತಿರುತ್ತಿದ್ದಳು. ಮಗುವೂ ದಿನೇ ದಿನೇ ಬೆಳೆದು ನೋಡುವುದಕ್ಕೆ ಮುದ್ದಾಗಿತ್ತು.

ಹೀಗಿರಲು, ಒಂದು ದಿನ ರಾಣಿ ತೋಟದಲ್ಲಿ ಮಗನನ್ನು ತನ್ನ ತೊಡೆಯ ಮೇಲೆ ಮಲಗಿಸಿಕೊಂಡು ಆಡಿಸುತ್ತಿದ್ದಳು. ಹಾಗೆಯೇ ಅವಳಿಗೆ ನಿದ್ದೆ ಬಂತು.

ಅರಮನೆಯ ಅಡಿಗೆಯವನಿಗೆ ರಾಜಕುಮಾರ ಏನು ಅಪೇಕ್ಷೆಪಟ್ಟರೆ ಅದು ನಡೆಯುತ್ತದೆ ಎಂಬ ಸಂಗತಿ ಗೊತ್ತಿತ್ತು. ಅವನು ರಾಣಿ ನಿದ್ದೆಹೋಗುತ್ತಿದ್ದಾಗ ಮೆಲ್ಲನೆ ಅಲ್ಲಿಗೆ ಬಂದು ಮಗುವನ್ನು ಕದ್ದ. ಅಲ್ಲೇ ಒಂದು

ನವಿಲು ಓಡಾಡುತ್ತಿತ್ತು. ಅವನು ಅದನ್ನು ಕೊಂದು ಅದರ ರಕ್ತವನ್ನು ರಾಣಿಯ ಸೀರೆಯ ಮೇಲೆಲ್ಲಾ ಚಿಮುಕಿಸಿದ. ಅನಂತರ ಅವನು ಮಗುವನ್ನು ಗುಟ್ಟಾದ ಸ್ಥಳವೊಂದಕ್ಕೆ ಎತ್ತಿಕೊಂಡು ಹೋದ. ಅಲ್ಲಿ ಅವನಿಗೆ ಆಪ್ತಳಾದ ಒಬ್ಬ ಹೆಂಗಸು ಅದಕ್ಕೆ ಶುಶ್ರೂಷೆಮಾಡಲು ಸಿದ್ಧಳಾಗಿದ್ದಳು. ಅದನ್ನು ಅವಳ ಕೈಗೆ ಕೊಟ್ಟು ಅವನು ಅರಮನೆಗೆ ಹಿಂದಿರುಗಿ, ರಾಜನ ಹತ್ತಿರಕ್ಕೆ ಹೋಗಿ, ರಾಣಿ ತನ್ನ ಮಗುವನ್ನು ದುಷ್ಟಮೃಗಗಳ ಪಾಲು ಮಾಡಿದಳೆಂದೂ ಅವಳು ಎಚ್ಚರದಪ್ಪಿದ್ದರಿಂದ ಈ ಅನಾಹುತವಾಯಿತೆಂದೂ ಚಾಡಿ ಹೇಳಿದ.

ರಾಣಿಯ ಸೀರೆಯ ಮೇಲೆಲ್ಲಾ ಬಿದ್ದಿದ್ದ ರಕ್ತದ ಕಲೆಗಳನ್ನು ನೋಡಿ ರಾಜ ಅಡಿಗೆಯವನು ಹೇಳಿದ್ದುದೆಲ್ಲಾ ನಿಜವೆಂದು ನಂಬಿದ. ಅಪರೂಪಕ್ಕೆ ಹುಟ್ಟಿದ್ದ ಮಗ ಹೋದನಲ್ಲ ಎಂಬ ದುಃಖದಿಂದ ಅವನ ಕೋಪ ಇನ್ನಷ್ಟು ಹೆಚ್ಚಿತು. ಅವನು ಉದ್ರೇಕದಿಂದ ಕೂಗಿ, ಹುಬ್ಬು ಗಂಟಿಟ್ಟುಕೊಂಡು, ಹಲ್ಲು ಕಡಿದು, ರಾಣಿಯನ್ನು ನಾನಾವಿಧವಾಗಿ ಬೈದ. ಅಷ್ಟಲ್ಲದೆ, ಒಂದು ಎತ್ತರವಾದ ಗೋಪುರವನ್ನು ಕಟ್ಟಿಸಿ ಅದರ ತುತ್ತತುದಿಯ ಅಂತಸ್ತಿನಲ್ಲಿ ಅವಳನ್ನು ಸೆರೆಯಿಡ ಬೇಕೆಂದೂ ಅವಳಿಗೆ ಯಾರೂ ಅನ್ನ ನೀರನ್ನು ಕೂಡ ಕೊಡಕೂಡದೆಂದೂ ಅಪ್ಪಣೆ ಮಾಡಿದ. ಅವಳನ್ನು ಇಟ್ಟಿದ್ದ ಕೋಣೆಯೊಳಕ್ಕೆ ಸೂರ್ಯನ ಬೆಳಕಾಗಲಿ ಚಂದ್ರನ ಬೆಳಕಾಗಲಿ ಬರುವಂತೆಯೇ ಇರಲಿಲ್ಲ. ರಾಣಿ ಈ ಕಗ್ಗವಿಯಲ್ಲಿ ಒಂಟಿ ಯಾಗಿ ಇರಬೇಕಾಯಿತು. ಆದರೆ ದೇವರು ಅವಳಿಗೆ ಸಹಾಯ ಮಾಡಲು ಸ್ವರ್ಗದಿಂದ ಇಬ್ಬರು ದೇವತೆಗಳನ್ನು ಕಳುಹಿಸಿದ. ಅವರು ಅಚ್ಚಬಿಳುಪಿನ ಪಾರಿವಾಳಗಳ ರೂಪವನ್ನು ಧರಿಸಿ, ದಿವಸಕ್ಕೆ ಎರಡುಸಾರಿ ಅವಳಿದ್ದೆಡೆಗೆ ಹಾರಿಬಂದು ಅವಳಿಗೆ ಆಹಾರವನ್ನು ಒದಗಿಸುತ್ತಿದ್ದರು. ಹೀಗೆ ಏಳು ವರ್ಷ ಕಳೆದವು.

ಈ ಮಧ್ಯೆ ಮಗುವನ್ನು ಕದ್ದಿದ್ದ ಅಡಿಗೆಯವನಿಗೆ ಒಂದು ಯೋಚನೆ ಬಂತು. ಅವನು "ಈ ಹುಡುಗ ಏನು ಅಪೇಕ್ಷೆಪಟ್ಟರೆ ಅದು ಆಗಿಹೋಗು ತ್ತದೆ. ಇವನು ದೊಡ್ಡವನಾಗಿ ಬುದ್ಧಿ ಬರುವವರೆಗೂ ಸುಮ್ಮನಿದ್ದರೆ ಕೊನೆಗೆ ನನ್ನ ನಾಶವಾಗಲಿ ಎಂದು ಅಪೇಕ್ಷೆಪಟ್ಟು ಕ್ಷಣಮಾತ್ರದಲ್ಲಿ ನನ್ನ ಹೆಸರಿಲ್ಲ ದಂತೆ ಮಾಡಿಬಿಡಬಹುದು" ಎಂದು ಶಂಕಿಸಿ, ಅವನನ್ನು ರಾಜಧಾನಿಯಿಂದ ದೂರದ ಒಂದು ಕಾಡಿಗೆ ಕರೆದುಕೊಂಡು ಹೋದ. ಇಷ್ಟು ಹೊತ್ತಿಗೆ ಹುಡುಗ

ನಿಗೆ ಮಾತು ಚೆನ್ನಾಗಿ ಬರುತ್ತಿತ್ತು. ಅಡಿಗೆಯವನು ಅವನನ್ನು ಕ್ರೂರವಾಗಿ ನೋಡುತ್ತ, "ಒಂದು ಸೊಗಸಾದ ಅರಮನೆಯೂ ಅದರ ಸುತ್ತಲೂ ಮನೋಹರವಾದ ಹೂದೋಟವೂ ಅದರೊಳಗೆ ಎಲ್ಲಾ ಸುಖಸಾಧನಗಳೂ ಬರಬೇಕೆಂದು ಅಪೇಕ್ಷೆಪಡು" ಎಂದ.

ಹುಡುಗನ ಬಾಯಿಂದ ಈ ಮಾತುಗಳು ಹೊರಬೀಳುವುದೇ ತಡ— ಅವನು ಬೇಕೆಂದುದೆಲ್ಲಾ ಸಿದ್ಧವಾಗಿ ನಿಂತಿತು.

ಸ್ವಲ್ಪ ಕಾಲದ ಅನಂತರ ಅಡುಗೆಯವನು ಹುಡುಗನನ್ನು ಕುರಿತು "ನೀನು ಒಬ್ಬನೇ ಇರುವುದು ಸರಿಯಲ್ಲ. ನಿನ್ನ ಜೊತೆಯಲ್ಲಿರಲು ಒಬ್ಬ ಹುಡುಗಿ ಬೇಕೆಂದು ಅಪೇಕ್ಷೆಪಡು" ಎಂದ.

ಹುಡುಗ ಹಾಗೆಯೇ ಅಪೇಕ್ಷೆಪಟ್ಟ. ತಕ್ಷಣವೇ ಅವಳು ಹಾಜರಾದಳು. ಅಂತಹ ಚೆಲುವೆ ಎಲ್ಲೂ ಇರಲಿಲ್ಲ. ಅಂದಿನಿಂದ ಅವರಿಬ್ಬರೂ ಒಟ್ಟಿಗೆ ಆಡಿಕೊಂಡಿದ್ದರು. ಇಬ್ಬರಿಗೂ ಪರಸ್ಪರ ಪ್ರೇಮ ಆರಂಭವಾಗಿ ಕ್ರಮೇಣ ವೃದ್ಧಿಹೊಂದಿತು. ಅಡಿಗಯವನೂ ಸುಖವಾಗಿಯೇ ಇರತೊಡಗಿದ. ಕೆಲವು ವರ್ಷಗಳು ಹೀಗೆಯೇ ಕಳೆದವು.

ಆದರೂ, ಎಂದಾದರೂ ಒಂದು ದಿನ ರಾಜಕುಮಾರ ತನ್ನ ತಂದೆಯ ಹತ್ತಿರಕ್ಕೆ ಹಿಂದಿರುಗಿ ಹೋಗಲು ಅಪೇಕ್ಷೆ ಪಡಬಹುದು; ಹಾಗೇನಾದರೂ ಆದರೆ ತನಗೆ ತೊಂದರೆ ತಪ್ಪದು ಎಂಬ ಹೆದರಿಕೆ ಅವನನ್ನು ಬಿಡಲಿಲ್ಲ. ಆದುದರಿಂದ ಅವನು ರಾಜಕುಮಾರನ ಸಂಗಾತಿಯಾದ ಹುಡುಗಿಯನ್ನು ಒಂದು ದಿನ ಗುಟ್ಟಾಗಿ ಕರೆದು ಅವಳ ಕೈಗೆ ಒಂದು ಚೂಪಾದ ಚೂರಿಯನ್ನು ಕೊಟ್ಟು, "ಈಪತ್ತು ರಾತ್ರಿ ಆ ಹುಡುಗ ಮಲಗಿ ನಿದ್ದೆಮಾಡುತ್ತಿರುವಾಗ ಇದರಿಂದ ಅವನ ಎದೆಯನ್ನು ತಿವಿದು ಅವನನ್ನು ಸಾಯಿಸಬೇಕು. ಹಾಗೆ ಸಾಯಿಸಿ ಅವನ ಹೃದಯವನ್ನೂ ನಾಲಗೆಯನ್ನೂ ನನಗೆ ತಂದು ತೋರಿಸಬೇಕು. ಇಲ್ಲದಿದ್ದರೆ ನಿನ್ನ ಪ್ರಾಣ ತೆಗೆದುಬಿಡುತ್ತೇನೆ" ಎಂದು ಹೇಳಿ ಎಲ್ಲಿಗೋ ಹೊರಟು ಹೋದ.

ಮಾರನೆಯ ದಿನ ಅವನು ಬಂದಾಗ ಹುಡುಗಿ ಅವನ ಮಾತಿನಂತೆ ನಡೆದಿರಲಿಲ್ಲ. "ಪಾಪ, ಏನೂ ಅರಿಯದ ನಿರಪರಾಧಿಯನ್ನು ನಾನೇಕೆ ಕೊಲ್ಲಬೇಕು?" ಎಂದು ಯೋಚಿಸಿ ಅವಳು ಹುಡುಗನ ತಂಟೆಗೆ ಹೋಗಿರಲಿಲ್ಲ.

ಅಡಿಗೆಯವನು "ನೀನು ನನ್ನ ಇಷ್ಟದಂತೆ ನಡೆಯದಿದ್ದರೆ ನಿನ್ನ ಪ್ರಾಣ ತೆಗೆದುಬಿಡುತ್ತೇನೆ" ಎಂದು ಮತ್ತೆ ಬೆದರಿಸಿದ. ಹೀಗೆ ಹೇಳಿ ಅವನು ಅತ್ತ ಹೋದನೋ ಇಲ್ಲವೋ ಇತ್ತ ಹುಡುಗಿ ಒಂದು ಜಿಂಕೆಯ ಮರಿಯನ್ನು ಕೊಂದು ಅದರ ನಾಲಗೆಯನ್ನೂ ಹೃದಯವನ್ನೂ ಕತ್ತರಿಸಿ ತೆಗೆದು ಜೋಪಾನ ವಾಗಿ ಒಂದು ತಟ್ಟೆಯಲ್ಲಿಟ್ಟಳು. ಅಡಿಗೆಯವನು ಮತ್ತೆ ಬರುತ್ತಿದ್ದುದನ್ನು ನೋಡಿ ಅವಳು ರಾಜಕುಮಾರನನ್ನು ಕುರಿತು "ಹಾಸಿಗೆಯಲ್ಲಿ ಮಲಗಿ ಮುಸುಕು ಹಾಕಿಕೊಂಡುಬಿಡು, ಅಲ್ಲಾಡಬೇಡ" ಎಂದಳು.

ಮುದುಕ ಬಂದವನೆ ಅವನು ಕೇಳಿದ ಮೊದಲ ಪ್ರಶ್ನೆ "ಎಲ್ಲಿ—ಆ ಹುಡುಗನ ನಾಲಗೆ ಮತ್ತು ಹೃದಯಗಳು ?" ಎಂದು.

ಹುಡುಗಿ ಅವೆರಡೂ ಇದ್ದ ತಟ್ಟೆಯನ್ನು ಅವನ ಕೈಯಲ್ಲಿಟ್ಟಳು. ಆದರೆ ರಾಜಕುಮಾರ ಮುಸುಕನ್ನು ಕಿತ್ತೆಸೆದು ಧಿಗ್ಗನೆ ಮೇಲಕ್ಕೆದ್ದು ಹಾಸಿಗೆಯಿಂದ ನೆಗೆದು ನಿಂತು, "ಪಾಪಿ, ನನ್ನನ್ನೇಕೆ ಸಾಯಿಸಬೇಕೆಂದು ನೀನು ಇಷ್ಟಪಟ್ಟೆ ? ನೀನು ಮಾಡಿದ ಕೆಲಸಕ್ಕೆ ತಕ್ಕ ಪ್ರತಿಫಲವನ್ನು ಈಗ ನಿನಗೆ ಕೊಟ್ಟೇ ಕೊಡು ತ್ತೇನೆ. ಈ ಕ್ಷಣದಿಂದ ನೀನೊಂದು ನಾಯಿಯಾಗಿ ನಾನು ಹೋದ ಕಡೆಯ ಲ್ಲೆಲ್ಲಾ ನನ್ನನ್ನು ಹಿಂಬಾಲಿಸುತ್ತಿರಬೇಕು" ಎಂದ. ಅವನು ಹಾಗೆಂದ ಒಡನೆಯೇ ಅಡಿಗೆಯವನು ನಾಯಿಯಾಗಿ ರಾಜಕುಮಾರನ ಪಾದಗಳನ್ನು ನೆಕ್ಕಲು ಆಶಿಸಿ ಬಾಲ ಅಲ್ಲಾಡಿಸತೊಡಗಿದ.

ಇನ್ನು ಕೆಲವು ವರ್ಷಗಳು ಕಳೆದವು. ರಾಜಕುಮಾರ ದೊಡ್ಡವ ನಾದಂತೆಲ್ಲಾ ಅವನಿಗೆ ತನ್ನ ತಾಯಿಯ ನೆನಪು ಹೆಚ್ಚಾಯಿತು. ಆಕೆ ಬದುಕಿರುವಳೋ ಇಲ್ಲವೋ ಎಂದು ಅವನು ಬಹುವಾಗಿ ಚಿಂತಿಸಿದ. ಕಡೆಗೆ ಒಂದು ದಿನ ಅವನು ತನ್ನ ಗೆಳತಿಯನ್ನು ಕುರಿತು "ನಾನು ನನ್ನ ಸ್ವದೇಶಕ್ಕೆ ಹೋಗಬೇಕೆಂದಿದ್ದೇನೆ. ನೀನೂ ನನ್ನ ಜೊತೆಯಲ್ಲಿ ಬರುವ ಹಾಗಿದ್ದರೆ ಕರೆದುಕೊಂಡು ಹೋಗಿ ನಿನ್ನ ಯೋಗಕ್ಷೇಮವನ್ನು ಚೆನ್ನಾಗಿ ನೋಡಿಕೊಳ್ಳು ತ್ತೇನೆ" ಎಂದ.

ಅವಳು "ಆ ದೇಶ ಎಷ್ಟು ದೂರ ಇದೆಯೋ! ಅದೂ ಅಲ್ಲದೆ ಯಾರಿಗೂ ನನ್ನ ಪರಿಚಯವೇ ಇಲ್ಲದ ಪರದೇಶಕ್ಕೆ ಬಂದು ನಾನು ಹೇಗೆ ಕಾಲ ಕಳೆಯು ವುದು ?" ಎಂದು ಹಿಂದೇಟು ಹಾಕಿದಳು. ಆದರೆ ಅವಳಿಗೆ ರಾಜಕುಮಾರನನ್ನು

ಬಿಟ್ಟು ತಾನೊಬ್ಬಳೇ ಇರುವುದೂ ಸ್ವಲ್ಪವೂ ಇಷ್ಟವಿರಲಿಲ್ಲ. ಅವಳನ್ನು ಬಿಟ್ಟು ಹೋಗಲು ಅವನಿಗೆ ಮೊದಲೇ ಮನಸ್ಸು ಬಾರದು. ಆದಕಾರಣ ಅವನು ಅವಳನ್ನು ಒಂದು ಪಾರಿಜಾತದ ಹೂವಾಗಿ ಮಾರ್ಪಾಟು ಮಾಡಿದ. ಅದು ಅವಳಷ್ಟೇ ಸುಂದರವಾಗಿ, ಯಾವಾಗಲೂ ಮೃದುವಾಗಿ, ಕೋಮಲ ವಾಗಿ, ಘಮಘಮಿಸುತ್ತಿತ್ತು. ಆ ಹೂವನ್ನು ತನ್ನ ತಲೆಯ ಕೂದಲಿನಲ್ಲಿ ಸಿಕ್ಕಿಸಿಕೊಂಡು ಅವನು ತವರ್ನಾಡಿನ ಕಡೆಗೆ ಹೊರಟ. ನಾಯಿ ವಿಧಿಯಿಲ್ಲದೆ ಅವನನ್ನು ಹಿಂಬಾಲಿಸಬೇಕಾಯಿತು.

ರಾಜಕುಮಾರ ಮೊದಲು ಬಂದುದು ತನ್ನ ತಾಯಿ ಬಂದಿಯಾಗಿದ್ದ ಗೋಪುರಕ್ಕೆ. ಅದು ಅತಿ ಎತ್ತರವಾಗಿದ್ದುದನ್ನು ಕಂಡು ಅವನು ಅದಕ್ಕೆ ಸರಿಹೋಗುವ ಒಂದು ಏಣಿ ಬೇಕೆಂದು ಅಪೇಕ್ಷೆಪಟ್ಟ.

ಏಣಿ ಪ್ರತ್ಯಕ್ಷವಾಯಿತು. ಅವನು ಅದನ್ನು ಏರಿ ಗೋಪುರದ ಬಾಗಿಲಲ್ಲಿ ನಿಂತು "ಅಮ್ಮಾ, ಬದುಕಿದ್ದೀಯಾ?" ಎಂದು ಕಾತರದ ಧ್ವನಿಯಲ್ಲಿ ಪ್ರಶ್ನಿಸಿದ.

ಅವಳು ಹೀಗೆ ಮಾತಾಡಿದವರು ತನಗೆ ನಿತ್ಯವೂ ಆಹಾರವನ್ನು ಒದಗಿಸುತ್ತಿದ್ದ ದೇವತೆಗಳೆಂದು ಭಾವಿಸಿ, "ಈಗ ತಾನೆ ಊಟ ಮಾಡಿದೆ. ಇನ್ನೇನೂ ಬೇಡ" ಎಂದಳು.

ಅವನು "ದುಷ್ಟಮೃಗಗಳ ಬಾಯಿಗೆ ಸಿಕ್ಕಿ ಸತ್ತುಹೋದನೆಂದು ಎಲ್ಲರೂ ಹೇಳುತ್ತಿದ್ದ ನಿನ್ನ ಮಗ ನಾನೇ. ನಾನು ಇನ್ನೂ ಬದುಕಿದ್ದೇನೆ. ನಿನಗೆ ಈ ಕಷ್ಟವನ್ನು ತಪ್ಪಿಸುತ್ತೇನೆ" ಎಂದು ನುಡಿದು ಏಣಿಯಿಳಿದ.

ಅಲ್ಲಿಂದ ಅವನು ನೇರವಾಗಿ ತನ್ನ ತಂದೆಯ ಅರಮನೆಗೆ ನಡೆದು ತಾನೊಬ್ಬ ಬೇಟೆಗಾರನೆಂದೂ ರಾಜನ ಆಶ್ರಯದಲ್ಲಿ ಕೆಲಸಕ್ಕೆ ಸೇರಿಕೊಳ್ಳಲು ಬಂದಿರುವುದಾಗಿಯೂ ಕಾವಲುಗಾರರಿಗೆ ಹೇಳಿದ. ಅವರು ಈ ವಿಷಯವನ್ನು ರಾಜನಿಗೆ ತಿಳಿಸಿದರು.

ರಾಜ ಅವನು ಆ ಊರಿನ ಆಚೆ ಇದ್ದ ಅರಣ್ಯದಲ್ಲಿ ಒಳ್ಳೆಯ ಜಾತಿಯ ಜಿಂಕೆಗಳು ತಂಡೋಪತಂಡವಾಗಿ ಬಂದು ನೆಲೆಸುವಂತೆ ಮಾಡಿದರೆ ಅವನನ್ನು ತನ್ನ ಮುಖ್ಯ ಬೇಟೆಗಾರನಾಗಿ ನೇಮಿಸಿಕೊಳ್ಳುವುದಾಗಿ ಹೇಳಿದ. ರಾಜನಿಗೆ ಜಿಂಕೆಯ ಮಾಂಸವೆಂದರೆ ಬಹು ಇಷ್ಟ.

ರಾಜಕುಮಾರ ರಾಜನ ಅಭಿಲಾಷೆಯನ್ನು ನೆರವೇರಿಸುವುದಾಗಿ ಮಾತು ಕೊಟ್ಟು, ಕೆಲವು ಬೇಟೆಗಾರರನ್ನು ತನ್ನೊಡನೆ ಕರೆದುಕೊಂಡು ಕಾಡಿಗೆ ಹೊರಟ.

ಅಲ್ಲಿ ಅವನು ಒಂದು ಮರದ ಕೆಳಗೆ ಕುಳಿತು, ಆ ಕಾಡಿನ ತುಂಬ ಜಿಂಕೆಗಳು ಗುಂಪು ಗುಂಪಾಗಿ ಅಲೆದಾಡಲೆಂದು ಅಪೇಕ್ಷಿಸಿದ. ಮರುಕ್ಷಣವೇ ಜಿಂಕೆಗಳ ದೊಡ್ಡದೊಂದು ಪಡೆ ಆ ಕಡೆ ಓಡಿ ಬಂತು. ಅವನ ಜೊತೆಯಲ್ಲಿ ಬಂದಿದ್ದ ಬೇಟೆಗಾರರು ಮೇಲಿಂದ ಮೇಲೆ ಬಾಣ ಬಿಟ್ಟು ಅವನ್ನು ಕೊಂದರು. ಅನಂತರ ಅವರು ಜಿಂಕೆಗಳ ಶವಗಳನ್ನು ಬಂಡಿಗಳಲ್ಲಿ ತುಂಬಿಕೊಂಡು ರಾಜ ಧಾನಿಗೆ ಹಿಂದಿರುಗಿದರು. ರಾಜನಿಗೆ ಅಂದು ಪರಮಾನಂದ. ಆ ದಿನ ರಾತ್ರಿಯೇ ಒಂದು ಭೋಜನ ಕೂಟ ನಡೆಯಬೇಕೆಂದೂ ಅದಕ್ಕೆ ಆಸ್ಥಾನಿಕ ರೆಲ್ಲಾ ಬರಬೇಕೆಂದೂ ಅವನು ಆಜ್ಞಾಪಿಸಿದ. ಜಿಂಕೆಯ ಮಾಂಸದಿಂದ ತಯಾರಾದ ರಸಕವಳ ಯಾರಿಗೆ ಬೇಡ? ಅದರ ಹೆಸರು ಕೇಳಿಯೇ ಎಷ್ಟೋ ಜನರ ಬಾಯಲ್ಲಿ ನೀರೂರಿತು.

ಊಟದ ಸಮಯದಲ್ಲಿ ರಾಜ ಹೊಸ ಬೇಟೆಗಾರನನ್ನು ಆದರದಿಂದ ಹತ್ತಿರಕ್ಕೆ ಕರೆದು, "ನೀನು ನನ್ನ ಬಲಗಡೆ ಕುಳಿತುಕೊಳ್ಳಬೇಕು. ಇಂದು ನಾವು ಅನುಭವಿಸುವ ಸುಖಸಂತೋಷಗಳೆಲ್ಲಾ ನಿನ್ನ ಕುಶಲತೆಯ ಫಲ" ಎಂದು ಅಭಿನಂದಿಸಿದ.

ರಾಜಕುಮಾರ "ಪ್ರಭುಗಳು ನನಗೆ ತೋರಿಸುತ್ತಿರುವ ಗೌರವ ಬಹಳ ಹೆಚ್ಚಿನದು. ನಾನು ಅಲ್ಪ, ಅದಕ್ಕೆ ಅರ್ಹನಲ್ಲ" ಎಂದ.

ಆದರೆ ರಾಜ ಅವನು ತನ್ನ ಬಲಗಡೆ ತನ್ನ ಪಕ್ಕದಲ್ಲೇ ಕುಳಿತುಕೊಳ್ಳ ಬೇಕೆಂದು ಬಲವಂತಪಡಿಸಿದ. ಹಾಗೆ ಕೂತಿದ್ದಾಗ ರಾಜಕುಮಾರ ತನ್ನ ತಾಯಿಯನ್ನು ಜ್ಞಾಪಿಸಿಕೊಂಡ, "ಇಲ್ಲಿರುವವರು ಯಾರಾದರೂ ಆಕೆ ಸೆರೆ ಮನೆಯಲ್ಲಿ ಹೇಗಿದ್ದಾಳೆ, ಬದುಕಿದ್ದಾಳೆಯೋ ಇಲ್ಲವೋ ಎಂದು ವಿಚಾರಿಸಲಿ" ಎಂದು ಅಪೇಕ್ಷೆಪಟ್ಟ.

ಅವನು ಮನಸ್ಸಿನಲ್ಲಿ ಹೀಗೆಂದುಕೊಂಡದ್ದೇ ತಡ, ರಾಜನ ಸೇನಾಪತಿ "ಮಹಾ ಪ್ರಭು, ರಾಣಿಯವರನ್ನು ಆ ಗೋಪುರದಲ್ಲಿ ಕೂಡಿಹಾಕಿ ಎಷ್ಟೋ ವರುಷಗಳಾದವು. ಇಷ್ಟು ಹೊತ್ತಿಗೆ ಅವರು ಹಸಿವಿನಿಂದಲೂ ಸಂಕಟದಿಂದಲೂ

ಸತ್ತೇ ಹೋಗಿರಬೇಕೆಂದು ನನಗೆ ಅನೇಕ ವೇಳೆ ಅನ್ನಿಸಿದೆ. ಪಾಪ!" ಎಂದ.

ರಾಜ "ಸತ್ತರೆ ಸಾಯಲಿ? ಅದರಿಂದ ಈಗೇನು ನಷ್ಟ? ಹುಟ್ಟಿದ್ದ ಒಬ್ಬ ಮಗನನ್ನು ಮೃಗಗಳ ಪಾಲು ಮಾಡಿದಳು! ನನ್ನ ಎದುರು ಅವಳ ಹೆಸರನ್ನು ಕೂಡ ಎತ್ತಬೇಡಿ!" ಎಂದ.

ಆಗ ರಾಜಕುಮಾರ ಎದ್ದು ನಿಂತು, "ಅಪ್ಪ. ಅಮ್ಮ ಇನ್ನೂ ಬದುಕಿದ್ದಾಳೆ. ನಾನೇ ಅವಳು ಹೆತ್ತಿದ್ದ ಮಗ. ನನ್ನನ್ನು ಎತ್ತಿಕೊಂಡು ಹೋದದ್ದು ದುಷ್ಟ ಮೃಗಗಳಲ್ಲ; ಆ ನೀಚ, ಅಡಿಗೆಯವನು. ಅಮ್ಮ ನನ್ನನ್ನು ತೊಡೆಯ ಮೇಲೆ ಮಲಗಿಸಿಕೊಂಡು ಆಡಿಸುತ್ತಿದ್ದಾಗ ಅವಳಿಗೆ ಹಾಗೆಯೇ ನಿದ್ದೆ ಬಂದುಬಿಟ್ಟಿತು. ಅವನು ಆಗ ನನ್ನನ್ನು ಕದ್ದು ಮುಚ್ಚಿಟ್ಟು, ತೋಟದಲ್ಲಿದ್ದ ಒಂದು ನವಿಲನ್ನು ಕೊಂದು ಅದರ ರಕ್ತವನ್ನು ಅವಳ ಸೀರೆಯ ಮೇಲೆಲ್ಲಾ ಚಿಮುಕಿಸಿದ" ಎಂದ.

ಹೀಗೆ ಹೇಳಿ ಅವನು ತನ್ನ ಹಿಂದೆಯೇ ಇದ್ದ ನಾಯಿಯನ್ನು ಹಿಡಿದೆಳೆದು, "ಇಗೋ ನೋಡು—ಆ ಪಾಪಿ ಇಲ್ಲೇ ಇದ್ದಾನೆ" ಎಂದು, ಅದಕ್ಕೆ ಮತ್ತೆ ಅದರ ಮೊದಲಿನ ರೂಪ ಬರಲೆಂದು ಅಪೇಕ್ಷೆಪಟ್ಟ. ಅದು ಮನುಷ್ಯನಾಯಿತು. ರಾಜನ ಹಳೆಯ ಅಡಿಗೆಯವನನ್ನು ಎಲ್ಲರೂ ಗುರುತಿಸಿದರು. ಅವನನ್ನು ನೋಡಿ ಅಲ್ಲಿ ನೆರೆದಿದ್ದವರೆಲ್ಲರಿಗೂ ಹಿಡಿಸಲಾರದಷ್ಟು ಕೋಪ ಉಕ್ಕಿತು. ಅವನನ್ನು ಕಗ್ಗತ್ತಲು ತುಂಬಿದ್ದ ನೆಲಮಾಳಿಗೆಯೊಂದರಲ್ಲಿ ಬಂಧಿಸಬೇಕೆಂದು ರಾಜ ಅಪ್ಪಣೆ ಮಾಡಿದ.

ಅನಂತರ ರಾಜಕುಮಾರ "ಅಪ್ಪ, ಇಷ್ಟು ವರ್ಷಗಳೂ ನನ್ನ ಸಂಗಾತಿಯಾಗಿದ್ದು, ತನ್ನ ಜೀವವೇ ಹೋಗಬಹುದೆಂಬ ಅಪಾಯವಿದ್ದರೂ ಅದಕ್ಕೆ ಹೆದರದೆ ನನ್ನ ಜೀವವನ್ನು ಉಳಿಸಿದ ಹುಡುಗಿಯನ್ನು ನೋಡಲು ನಿಮಗೆ ಆಸಕ್ತಿಯಿದೆಯೆ?" ಎಂದು ಕೇಳಿದ.

ರಾಜ "ಓಹೋ! ಖಂಡಿತ!" ಎಂದ.

ರಾಜಕುಮಾರ "ಹಾಗಾದರೆ ನಿಮಗೆ ನಾನು ಅವಳನ್ನು ಒಂದು ಹೂವಿನ ರೂಪದಲ್ಲಿ ತೋರಿಸುತ್ತೇನೆ" ಎಂದು ಹೇಳಿ, ತನ್ನ ತಲೆಯಲ್ಲಿದ್ದ ಪಾರಿಜಾತವನ್ನು ತೆಗೆದು ಎಲ್ಲರಿಗೂ ಕಾಣುವಂತೆ ಹಿಡಿದ.

ರಾಜ ತಾನು ಅಂತಹ ಸುಂದರವಾದ ಹೂವನ್ನು ಹಿಂದೆ ಎಂದೂ ನೋಡಿಯೇ ಇರಲಿಲ್ಲವೆಂದ.

ರಾಜಕುಮಾರ "ಈಗ ಅವಳನ್ನು ಅವಳ ನಿಜವಾದ ರೂಪದಲ್ಲಿ ತೋರಿಸುತ್ತೇನೆ" ಎನ್ನುತ್ತ, ಅವಳು ಮತ್ತೆ ಹುಡುಗಿಯಾಗಬೇಕೆಂದು ಬಯಸಿದ. ಹೂವು ಹುಡುಗಿಯಾಯಿತು. ಅಂತಹ ಹುಡುಗಿ ಹಿಂದೆ ಇರಲಿಲ್ಲ, ಮುಂದೆ ಇರುವುದಿಲ್ಲ.

ಆಗ ರಾಜ ರಾಣಿಯನ್ನು ಭೋಜನಕ್ಕೆ ಕರೆತರಲು ಹೇಳಿ ಇಬ್ಬರು ಸೇವಕರನ್ನು ಆಕೆ ಇದ್ದ ಗೋಪುರಕ್ಕೆ ಕಳುಹಿಸಿದ.

ರಾಣಿಯೇನೋ ಬಂದಳು. ಆದರೆ ಅವಳು ಒಂದು ತುತ್ತು ಆಹಾರವನ್ನೂ ಮುಟ್ಟಲಿಲ್ಲ "ಇಷ್ಟು ದಿವಸ ನನಗೆ ಅನ್ನ ನೀರುಗಳನ್ನು ಕೊಟ್ಟು ಕಾಪಾಡಿದ ಕರುಣಾಮೂರ್ತಿಯಾದ ಭಗವಂತ ಇಷ್ಟರಲ್ಲೇ ನನಗೆ ಈ ಲೋಕದ ಬಂಧನ ದಿಂದಲೇ ಬಿಡುಗಡೆಯನ್ನು ದಯಪಾಲಿಸುತ್ತಾನೆ" ಎಂದಳು. ಅವಳು ಮಾಡಿದ್ದು ಸರಿ ಎಂದು ತೋರುವುದಿಲ್ಲವೆ ನಿಮಗೆ? ದೇವತೆಗಳು ಕೊಟ್ಟ ಆಹಾರವನ್ನು ತಿಂದ ಮೇಲೆ ಮನುಷ್ಯರು ತಯಾರಿಸಿದ ಮದ್ಯ ಮಾಂಸಗಳನ್ನು ಸೇವಿಸುವುದುಂಟೆ ?

ರಾಣಿ ಅನಂತರ ಮೂರು ದಿನಗಳು ನೆಮ್ಮದಿಯಾಗಿದ್ದು ತೀರಿಕೊಂಡಳು. ಅವಳಿಗೆ ಅನ್ನ ನೀರನ್ನು ತಂದುಕೊಡುತ್ತಿದ್ದ ಬಿಳಿಯ ಪಾರಿವಾಳಗಳೂ ಅವಳೊಡನೆಯೇ ಪ್ರಾಣಬಿಟ್ಟವು. ಅವನ್ನೂ ಅವಳ ಜೊತೆಯಲ್ಲೇ ಹೂಳಿ ಸಮಾಧಿಮಾಡಿದರು.

ರಾಜ ತನ್ನ ಇಷ್ಟೆಲ್ಲಾ ಕಷ್ಟಗಳಿಗೂ ಕಾರಣನಾಗಿದ್ದ ಆ ಅಡಿಗೆಯವನಿಗೆ ಮರಣ ದಂಡನೆ ವಿಧಿಸಿದ. ನಡೆದಿದ್ದುದನ್ನೆಲ್ಲಾ ನೆನೆಸಿಕೊಂಡಾಗ ಅವನ ದುಃಖ ದುಸ್ಸಹವಾಯಿತು. ಅದರಿಂದ ಕೃಶವಾಗಿ, ಆರು ತಿಂಗಳು ಕಳೆಯುವ ಮೊದಲೇ ಅವನೂ ಮೃತಿಹೊಂದಿದ.

ರಾಜಕುಮಾರ ಪಾರಿಜಾತದ ಹೂವಿನ ರೂಪದಲ್ಲಿ ತಾನು ತಲೆಯ ಮೇಲೆ ಹೊತ್ತು ತಿರುಗಿದ್ದ ಹುಡುಗಿಯನ್ನೇ ಮದುವೆಯಾದ.

ಅವರಿಬ್ಬರೂ ಇನ್ನೂ ಇರುವರೋ ಇಲ್ಲವೋ ನಾನು ಹೇಳಲಾರೆ. ನೀವೇ ನೋಡಿಕೊಂಡು ಬನ್ನಿ.

# ಮೊದ್ದು ಸಿದ್ದಮ್ಮ

ಒಂದು ಊರಿನಲ್ಲಿ ಒಬ್ಬ ರೈತನಿದ್ದ. ಅವನ ಹೆಸರು ಮುದ್ದಣ್ಣ ಎಂದು. ಅವನಿಗೊಬ್ಬ ಹೆಂಡತಿಯಿದ್ದಳು. ಅವಳ ಹೆಸರು ಸಿದ್ದಮ್ಮ. ಅವರಿಬ್ಬರಿಗೂ ಮದುವೆಯಾಗಿ ಬಹಳ ಕಾಲವೇನೂ ಆಗಿರಲಿಲ್ಲ.

ಒಂದು ದಿನ ಮುದ್ದಣ್ಣ ಹೆಂಡತಿಯನ್ನು ಕುರಿತು "ಸಿದ್ದಿ, ಇವತ್ತು ಹೊಲದಲ್ಲಿ ಬಹಳ ಕೆಲಸವಿದೆ. ಸಂಜೆಯತನಕ ಒಂದೇ ಸಮನೆ ದುಡಿಯ ಬೇಕು. ಮನೆಗೆ ಬರುವ ಹೊತ್ತಿಗೆ ದಣಿವು ವಿಪರೀತವಾಗಿರುತ್ತದೆ. ಹಸಿವು ತಡೆಯುವ ಹಾಗಿರುವುದಿಲ್ಲ. ರಾತ್ರಿ ಊಟಕ್ಕೆ ರುಚಿರುಚಿಯಾಗಿ ಒಳ್ಳೆಯ ನೆಲ್ಲಕ್ಕಿ ಅನ್ನ, ಜೋಳದ ರೊಟ್ಟಿ, ಹೊಸದಾಗಿ ತೆಗೆದ ಬೆಣ್ಣೆ, ತಣ್ಣಗೆ ಮಜ್ಜಿಗೆ ಇಷ್ಟನ್ನೂ ಮಾಡಿಟ್ಟಿರು. ಬಂದವನೇ ಚೆನ್ನಾಗಿ ಉಂಡು ಸುಖವಾಗಿ ಮಲಗಿಬಿಡುತ್ತೇನೆ" ಎಂದ.

ಸಿದ್ದಮ್ಮ "ಅಯ್ಯೋ, ಅದಕ್ಕೇನು ಕಷ್ಟಪಡಬೇಕು? ಮನೆಯಲ್ಲಿ ಅಕ್ಕಿಯಿಲ್ಲವೆ, ಜೋಳವಿಲ್ಲವೆ, ಹಾಲು ಮೊಸರಿಲ್ಲವೆ? ನೀನು ಬರುವ ಹೊತ್ತಿಗೆ ತಟ್ಟೆ ಹಾಕಿ ಸಿದ್ಧಮಾಡಿರುತ್ತೇನೆ" ಎಂದು ನಸುನಕ್ಕಳು.

ಸಾಯಂಕಾಲ ಮುದ್ದಣ್ಣ ಹಿಂತಿರುಗಿ ಬರುವ ಸಮಯವಾಯಿತು. ಸಿದ್ದಮ್ಮ ಅಡಿಗೆಯ ಮನೆಯಲ್ಲಿ ಅವಸರವಸರವಾಗಿ ಕೆಲಸ ಮಾಡುತ್ತಿದ್ದಳು. ಒಂದು ಒಲೆಯ ಮೇಲೆ ಅಕ್ಕಿ ಬೇಯುತ್ತಿತ್ತು, ಇನ್ನೊಂದರ ಮೇಲೆ ಹೆಂಚು ಕಾಯುತ್ತಿತ್ತು. ಒಂದಾದನಂತರ ಒಂದರಂತೆ ರೊಟ್ಟಿಗಳೂ ಸುಟ್ಟು ಸುಟ್ಟು ಕೆಳಗಿಳಿದವು. ಹತ್ತಿಪ್ಪತ್ತು ನಿಮಿಷಗಳಲ್ಲಿ ಮೂರು ನಾಲ್ಕು ರೊಟ್ಟಿಗಳು ರಾಶಿ ಬಿದ್ದವು. ಆಗ ಸಿದ್ದಮ್ಮ "ಇವತ್ತಿಗೆ ಇಷ್ಟು ರೊಟ್ಟಿಗಳು ಸಾಕು. ಅನ್ನವೂ ಕುದಿಯುತ್ತಿದೆ. ಇನ್ನೇನು ಗಂಡ ಬಂದು ಬಿಡುತ್ತಾನೆ. ಪಾಪ, ಬಿಸಿಲಿನಲ್ಲಿ ದುಡಿದು ದುಡಿದು ಎಷ್ಟು ಆಯಾಸ ಪಟ್ಟಿರುತ್ತಾನೋ ಏನೋ! ಬೆಣ್ಣೆ

ಮಜ್ಜಿಗೆಗಳನ್ನು ತಂದು ಬಡಿಸುವುದಕ್ಕೆ ಸಿದ್ಧವಾಗಿಟ್ಟರೋಣ" ಎಂದುಕೊಂಡು ಪಕ್ಕದ ಕೋಣೆಯಲ್ಲಿ ನೆಲುವಿನ ಮೇಲಿಟ್ಟಿದ್ದ ಮಜ್ಜಿಗೆಯನ್ನು ತರಲು ಹೊರಟಳು.

ಮಜ್ಜಿಗೆ ಗಡಿಗೆ ಸುಮಾರಾಗಿ ದೊಡ್ಡದಾಗಿಯೇ ಇತ್ತು. ಅವಳು ಅಷ್ಟು ಗಾತ್ರದ ಗಡಿಗೆಯನ್ನು ಯಾರು ಕೆಳಕ್ಕೆ ಇಳಿಸುವವರು ಎಂದು ಪಾಲು ಮಾರಿ, ಅದರಿಂದ ಇನ್ನೊಂದು ಸಣ್ಣ ಪಾತ್ರೆಗೆ ಮಜ್ಜಿಗೆಯನ್ನು ಬಗ್ಗಿಸಿ ಕೊಳ್ಳತೊಡಗಿದಳು. ಮಜ್ಜಿಗೆ ಗಡಿಗೆಯಿಂದ ಪಾತ್ರೆಗೆ ಹರಿಯುತ್ತಿದ್ದಾಗ ಇದ್ದಕ್ಕಿದ್ದಂತೆಯೇ ಅವಳಿಗೆ ತಾನು ಅಡಿಗೆ ಮನೆಯಲ್ಲಿ ರೊಟ್ಟಿಗಳನ್ನು ಮುಚ್ಚಿಡದೆ ಹಾಗೆಯೇ ಬಿಟ್ಟು ಬಂದಿದ್ದುದು ನೆನಪಾಯಿತು. "ಅರರೇ, ಎಂಥ ಕೆಲಸ ಮಾಡಿದೆ! ಆ ಹಾಳು ನಾಯಿ ಇಲ್ಲೇ ಎಲ್ಲೋ ಗುರುಗುಟ್ಟು ತ್ತಿತ್ತು. ಅದೇನಾದರೂ ವಾಸನೆ ಹಿಡಿದು ಒಳಕ್ಕೆ ನುಗ್ಗಿ ಒಂದೆರಡು ರೊಟ್ಟಿ ಗಳನ್ನು ಅಪಹರಿಸಿದರೆ ಆಯಿತು!" ಎಂದುಕೊಂಡು, ಅವಳು ಕೈಯಲ್ಲಿದ್ದ ಮಜ್ಜಿಗೆಯ ಪಾತ್ರೆಯನ್ನು ನೆಲದಮೇಲೆ ಒಡಿದು ಅಡಿಗೆಯ ಮನೆಗೆ ಓಡಿದಳು. ಹೋಗುವ ಅವಸರದಲ್ಲೂ ಗಲಿಬಿಲಿಯಲ್ಲೂ ಅವಳು ತಾನು ಅಷ್ಟು ಹೊತ್ತೂ ನೆಲುವಿನ ಮೇಲಿದ್ದ ಗಡಿಗೆಯನ್ನು ಬಗ್ಗಿಸಿ ಹಿಡಿದು ಕೊಂಡಿದ್ದ ಸಂಗತಿಯನ್ನೇ ಮರೆತು ಬಿಟ್ಟಳು. ಅವಳು ಅಲ್ಲಿಂದ ಹೊರಟು ಹೋದ ಮೇಲೂ ಗಡಿಗೆ ಒಂದು ಪಕ್ಕಕ್ಕೆ ತೀರಾ ಬಗ್ಗಿಯೇ ಇದ್ದುದರಿಂದ ಅದರಲ್ಲಿದ ಮಜ್ಜಿಗೆ ಧಾರೆಧಾರೆಯಾಗಿ ಸುರಿಯಿತು. ಸುರಿದ ಮಜ್ಜಿಗೆ ನೆಲದ ಮೇಲೆಲ್ಲಾ ಹರಿದು ಬೆಳ್ಳಗೆ ನಿಂತುಕೊಂಡಿತು. ಅವಳು ಆಗಲೇ ಒಂದಿಷ್ಟು ಮಜ್ಜಿಗೆಯನ್ನು ಸಣ್ಣಪಾತ್ರೆಗೆ ಬಗ್ಗಿಸಿಕೊಂಡಿದ್ದಳಷ್ಟೆ. ಅದನ್ನು ಅವಳು ನೆಲದ ಮೇಲೆ ಕುಕ್ಕಿದ ರಭಸಕ್ಕೆ ಆ ಮಜ್ಜಿಗೆಯೆಲ್ಲಾ ತುಳುಕಿ ಅದೂ ಬರಿದಾಗಿತ್ತು.

ಅತ್ತ, ಅವಳು ಹೆದರಿದ್ದಕ್ಕೆ ಸರಿಯಾಗಿ, ಪಕ್ಕದ ಮನೆಯ ನಾಯಿ ಹಿತ್ತಲ ಬಾಗಿಲಿನಿಂದ ಅಡಿಗೆಯ ಮನೆಯನ್ನು ಹೊಕ್ಕು ಒಂದು ರೊಟ್ಟಿಯನ್ನು ಕಚ್ಚಿಕೊಂಡು ಮೆಲ್ಲನೆ ಹಿಂದಿರುಗುತ್ತಿತ್ತು. ಅವಳು ಅದನ್ನು ಹಿಂಬಾಲಿಸಿದಳು. ಅದು ಹಿತ್ತಲಿನ ಬೇಲಿಯಲ್ಲಿ ನುಸುಳಿ ಆಚೆ ಇದ್ದ ಬಯಲಿಗೆ ನುಗ್ಗಿತು. ಅವಳು ಬೇಲಿಯ ಕಳ್ಳಿ - ಮುಳ್ಳುಗಳ ಸಂದಿಯಲ್ಲಿ ನಾಯಿಯಷ್ಟು

ಸುಲಭವಾಗಿ ಹಾದು ಹೋಗುವ ಹಾಗಿರಲಿಲ್ಲ. ಅವಳು ಮನೆಯ ಮುಂಬಾಗಿಲಿನಿಂದ ಹೊರಬಿದ್ದು ಸುತ್ತಿಕೊಂಡು ಬಯಲಿಗೆ ಬರುವ ವೇಳೆಗೆ ನಾಯಿ ಎಷ್ಟೋ ದೂರ ಓಡಿತ್ತು. ಅದನ್ನು ಅಟ್ಟಿಸಿಕೊಂಡು ಅವಳೂ ಓಡಿದಳು. ಇವಳನ್ನು ಕಂಡು ಅದು ಇನ್ನಷ್ಟು ವೇಗವಾಗಿ ಮತ್ತಷ್ಟು ದೂರ ಪಲಾಯನ ಮಾಡಿತು. ಏನೇ ಆದರೂ ಅದು ತನ್ನ ಬಾಯಿಗೆ ಸಿಕ್ಕಿದ್ದ ರೊಟ್ಟಿಯ ಹಿಡಿತವನ್ನು ಮಾತ್ರ ಸಡಿಲಿಸಲಿಲ್ಲ.

ಸಿದ್ದಮ್ಮನಿಗೆ ಸಾಕಾಯಿತು. ಓಡಿ ಓಡಿ ಅವಳಿಗೆ ಮೇಲುಸಿರು ಬಂತು, ಬೆವರು ಕಿತ್ತುಕೊಂಡಿತು. ಅವಳು "ಆದದ್ದು ಆಗಿಹೋಯಿತು, ಏನು ಮಾಡುವುದು ?" ಎಂದು ತನಗೆ ತಾನೇ ಸಮಾಧಾನ ಹೇಳಿಕೊಂಡು ಮನೆಯ ಕಡೆಗೆ ತಿರುಗಿದಳು. ಓಡಿ ಆಯಾಸವಾಗಿದ್ದುದರಿಂದ ಅವಳಿಗೆ ಬೇಗ ಬೇಗ ನಡೆಯಲು ಆಗಲಿಲ್ಲ. ಆದ್ದರಿಂದ ಅವಳು ಸಂಜೆಯ ತಂಗಾಳಿಗೆ ಮೈಯೊಡ್ಡಿ ಸಾವಧಾನವಾಗಿ ನಡೆದಳು.

ಇಷ್ಟು ಹೊತ್ತಿಗೆ ಮನೆಯಲ್ಲಿ ನೆಲುವಿನ ಮೇಲಿನ ಗಡಿಗೆಯಲ್ಲಿದ್ದ ಮಜ್ಜಿಗೆಯೆಲ್ಲಾ ಮಣ್ಣಿನ ಪಾಲಾಗಿತ್ತು. ಗಂಡ ಬಂದು ನೋಡಿದರೆ ಏನಾದರೂ ಎಂದಾನೆಂದು ಅವಳು ತಕ್ಷಣ ಒಂದು ಉಂಡೆ ಸಗಣಿಯನ್ನು ತಂದು ಅದನ್ನು ಚೆಲ್ಲಿದ್ದ ಆ ಮಜ್ಜಿಗೆಯಲ್ಲೇ ಕಲಸಿ ನೆಲವನ್ನೆಲ್ಲಾ ಸಾರಿಸಿದಳು. ಆ ನೆಲ ಎಂಥ ಪುಣ್ಯ ಮಾಡಿತ್ತು !

ಅನಂತರ ಅವಳು ಅಡಿಗೆಯ ಮನೆಗೆ ಬಂದು ನೋಡುತ್ತಾಳೆ—ಅವರ ಎಮ್ಮೆಯ ಕರು ಒಳಕ್ಕೆ ನುಗ್ಗಿ ಉಳಿದಿದ್ದ ರೊಟ್ಟಿಗಳನ್ನೆಲ್ಲಾ, ಯಾರೊಬ್ಬರ ಅಡ್ಡಿ ಆತಂಕವೂ ಇಲ್ಲದೆ, ಹೊಟ್ಟೆಗೆ ಕಳುಹಿಸಿ ಆನಂದದಿಂದ ಮೆಲುಕು ಹಾಕುತ್ತಿತ್ತು !

"ರೊಟ್ಟಿಗಳಂತೂ ಹೋದವು, ಅನ್ನವಾದರೂ ಉಳಿದಿದೆಯಲ್ಲ, ಸದ್ಯ !" ಎಂದು ಸಿದ್ದಮ್ಮ ಅನ್ನದ ತಪ್ಪಲೆಯ ಮೇಲೆ ಮುಚ್ಚಿದ್ದ ತಟ್ಟೆಯನ್ನು ಎತ್ತಿದಳು. ಧಗ ಧಗ ಎಂದು ಉರಿಯುತ್ತಿರುವ ಒಲೆಯ ಮೇಲೆ ಎಷ್ಟು ಹೊತ್ತಾದರೂ ಇಟ್ಟಿದ್ದರೆ ಅಡಿಗೆ ಆಗದೆ ಇದ್ದೀತೆ ? ಅಕ್ಕಿಯೂ ಬೆಂದಿತ್ತು, ಅನ್ನವೂ ಆಗಿತ್ತು ; ಸೀದೂ ಹೋಗಿತ್ತು. ಪಾಪ, ಹೆಂಡತಿ ತನಗೋಸ್ಕರ ನಳಪಾಕ ಇಳಿಸಿ ಕಾದುಕೊಂಡಿರುತ್ತಾಳೆ ಎಂದು ಆತುರದಿಂದಲೂ ಆಸೆಯಿಂದಲೂ

ಮುದ್ದಣ್ಣ ಮನೆಗೆ ಬಂದರೆ, ಅವನಿಗೆ ಲಭಿಸಿದ್ದು ಅರೆಹೊಟ್ಟೆಗೆ ಕೂಡ ಸಾಲದಷ್ಟು ಸೀಕಲು ಅನ್ನ. "ಏಕೆ ಹೀಗಾಯಿತು?" ಎಂದು ಅವನು ಕೇಳಲು ಸಿದ್ದಮ್ಮ ನಡೆದಿದ್ದುದನ್ನೆಲ್ಲಾ ವರ್ಣಿಸಿ, "ನಾನೇನು ಮಾಡಲಿ? ಹೀಗೆಲ್ಲಾ ಆಗುತ್ತೆ ಎಂದು ನನಗೆ ಗೊತ್ತಿತ್ತೆ? ದೊಡ್ಡವನು—ಗಂಡಸು—ನೀನು ಮೊದಲೇ ತಿಳಿಸಬೇಕಾಗಿತ್ತೋ ಇಲ್ಲವೋ ಇದನ್ನೆಲ್ಲಾ ನನಗೆ?" ಎಂದುಬಿಟ್ಟಳು. ಹೆಂಡತಿ ಎಂದರೆ ಮುದ್ದಣ್ಣನಿಗೆ ಪಂಚಪ್ರಾಣ. ಅವಳ ಮುಗುಳು ನಗುವಿಗೆ ಮನಸೋತೇ ಅವನು ಅವಳನ್ನು ಮದುವೆಯಾಗಿದ್ದದ್ದು. ಈಗ ಇನ್ನೇನು ಮಾಡುತ್ತಾನೆ? ಉಕ್ಕಿ ಬರುತ್ತಿದ್ದ ಕೋಪವನ್ನು ತಡೆಗಟ್ಟಿ, "ಹೋಗಲಿ ಬಿಡು, ಇಷ್ಟಾದರೂ ಉಳಿದಿದೆಯಲ್ಲ" ಎಂದು ಸುಮ್ಮನಾದ.

ಆದರೂ ಇವಳನ್ನು ಏತಕ್ಕೂ ನಂಬಬಾರದು, ಶುದ್ಧ ಪೆದ್ದು ಎಂದು ಆನತ್ತು ಅವನಿಗೆ ಮನದಟ್ಟಾಯಿತು. ಇನ್ನು ಮೇಲೆ ಎಚ್ಚರಿಕೆಯಿಂದ ಇರೋಣ ಎಂದುಕೊಂಡ.

ಈ ನಿರ್ಣಯದ ಪರಿಣಾಮವಾಗಿಯೋ ಏನೋ, ಮಾರನೆಯ ದಿನವೇ ಮುದ್ದಣ್ಣ ಹೆಂಡತಿಯನ್ನು "ಒಂದು ಮಾತಿದೆ ಬಾ" ಎಂದು ಕರೆದ. ಅವನ ಹತ್ತಿರ ಒಂದಿಷ್ಟು ಚಿನ್ನದ ಚೂರುಗಳಿದ್ದವು. ಅವನು ಸಂಪಾದನೆ ಮಾಡಲು ಆರಂಭಿಸಿದಾಗಿನಿಂದಲೂ ಆಗೊಂದು ಈಗೊಂದು ಕೈಯಲ್ಲಿ ಕಾಸು ಕೂಡಿದ ಹಾಗೆಲ್ಲಾ ಕೊಂಡಿಟ್ಟುಕೊಂಡಿದ್ದ ಚಿನ್ನದ ಚೂರುಗಳು ಅವು. ಇವಳು ಅವನ್ನು ಎಲ್ಲಾದರೂ ಎಸೆದುಬಿಟ್ಟಾಳು, ಏನಾದರೂ ಮಾಡಿಯಾಳು, ಮೊದಲೇ ಜೋಪಾನವಾಗಿದ್ದರೆ ವಾಸಿ ಎಂದು ಯೋಚಿಸಿ ಅವನು ಅವನ್ನು ಅವಳಿಗೆ ತೋರಿಸಿ, "ಇಗೋ ನೋಡು, ಇವು ಹಿತ್ತಾಳೆ ಚೂರುಗಳು. ಸದ್ಯಕ್ಕೆ ಇವುಗಳಿಂದ ನಮಗೆ ಯಾವ ಉಪಯೋಗವೂ ಇಲ್ಲ. ಆದ್ದರಿಂದ ಇವನ್ನು ಒಂದು ಡಬ್ಬಿಯಲ್ಲಿ ಹಾಕಿ ಹಿತ್ತಲಲ್ಲಿ ಆ ದಾಳಿಂಬೆ ಮರದ ಕೆಳಗೆ ಹೂಳಿರುತ್ತೇನೆ. ಮುಂದೆ ಎಂದಾದರೂ ಬೇಕಾದರೆ ಅಗೆದು ತೆಗೆದು ಕೊಳ್ಳಬಹುದು. ಮನೆಯಲ್ಲೇ ಇಟ್ಟುಕೊಂಡಿದ್ದರೆ ಅಲ್ಲಿ ಇಲ್ಲಿ ಬಿದ್ದು ಹೋಗಿಬಿಡುತ್ತವೆ. ಈಗಲೇ ಹೇಳಿರುತ್ತೇನೆ. ನೀನು ಮಾತ್ರ ಏನೇ ಆದರೂ ಅವುಗಳ ತಂಟೆಗೆ ಹೋಗಕೂಡದು" ಎಂದ.

ಸಿದ್ದಮ್ಮ "ಇಲ್ಲ. ನಿನ್ನಾಣೆಗೂ ನಾನು ಅವುಗಳ ತಂಟೆಗೆ ಹೋಗು ವುದಿಲ್ಲ" ಎಂದಳು.

ಒಂದೆರಡು ದಿವಸ ಕಳೆದವು. ಮುದ್ದಣ್ಣ ಬಿತ್ತನೆಗೆ ಬೀಜ ತರುವುದಕ್ಕೆಂದು ಪಟ್ಟಣಕ್ಕೆ ಹೋಗಿದ್ದ. ಅವನು ಅತ್ತ ಹೋದ ಸ್ವಲ್ಪ ಹೊತ್ತಿಗೆ ಇತ್ತ ಇಬ್ಬರು ವ್ಯಾಪಾರಿಗಳು ತಮ್ಮ ತಲೆಗಳ ಮೇಲೆ ಒಬ್ಬೊಬ್ಬನು ಒಂದೊಂದು ಬುಟ್ಟಿಯ ತುಂಬ ನಾನಾ ತೆರದ ಸಣ್ಣ ಪುಟ್ಟ ಗೊಂಬೆಗಳನ್ನೂ ಗಾಜಿನ ಪದಾರ್ಥಗಳನ್ನೂ ಹೊತ್ತುಕೊಂಡು "ಗೊಂಬೆ ಬೇಕೇನಮ್ಮ ಗೊಂಬೆ, ಒಳ್ಳೊಳ್ಳೆ ಗಾಜಿನ ಗೊಂಬೆ" ಎಂದು ಕೂಗುತ್ತ ಬಂದರು.

ಅವರು ತಮ್ಮ ಮನೆಯ ಎದುರಿಗೆ ಬರುವ ವೇಳೆಗೆ ಸಿದ್ದಮ್ಮ ಬಾಗಿಲಲ್ಲಿ ನಿಂತಿದ್ದಳು. ಬುಟ್ಟಿಗಳಲ್ಲಿದ್ದ ಬಗೆಬಗೆಯ ಬಣ್ಣಬಣ್ಣದ ಗಾಜಿನ ಗೊಂಬೆಗಳನ್ನೂ, ಲೋಟ, ಬಟ್ಟಲು, ತಟ್ಟೆ ಮೊದಲಾದ ಕಣ್ಣು ಸೆಳೆಯುವ ಸಾಮಾನುಗಳನ್ನೂ ನೋಡಿ ಅವಳಿಗೆ ಅವುಗಳಲ್ಲಿ ಒಂದೆರಡನ್ನಾದರೂ ಕೊಳ್ಳಬೇಕೆಂದು ತಡೆಯಲಾರದಷ್ಟು ಆಸೆಯಾಯಿತು. ಅದಕ್ಕೆ ತಕ್ಕ ಹಾಗೆ ಅವರು ತಮ್ಮ ಬುಟ್ಟಿಗಳನ್ನು ಅವಳ ಮುಂದೆ ಇಳಿಸಿಟ್ಟು "ಇಂಥ ಅಂದಚೆಂದದ ಅಗ್ಗದ ಪದಾರ್ಥ ಈ ಊರಿಗೆ ಮತ್ತೆ ಬರುವುದಿಲ್ಲ" ಎಂದು ತಮ್ಮ ಸರಕನ್ನು ಈಚೆಗೆ ತೆಗೆದು ಅವಳಿಗೆ ತೋರಿಸಿ ತೋರಿಸಿ ಹೊಗಳತೊಡಗಿದರು. ಸಿದ್ದಮ್ಮ ಕಣ್ಣುಗಳೆರಡನ್ನೂ ಅಗಲಿಸಿಕೊಂಡು ಅವನ್ನು ನೋಡುತ್ತ, "ನನಗೇನೋ ಇಂಥ ಪದಾರ್ಥಗಳನ್ನು ಕೊಂಡುಕೊಳ್ಳಬೇಕೆಂದು ಆಸೆ. ಆದರೆ ಏನು ಮಾಡಲಿ ? ನನ್ನ ಹತ್ತಿರ ಒಂದು ಬಿಡಿಕಾಸೂ ಇಲ್ಲ. ನಿಮಗೇನಾದರೂ ಒಂದು ಮೂರು ನಾಲ್ಕು ಹಿತ್ತಾಳೆಯ ಚೂರುಗಳಿಂದ ಪ್ರಯೋಜನವಾಗುವ ಹಾಗಿದ್ದರೆ ಅವನ್ನು ಕೊಟ್ಟು ಕೊಂಡುಕೊಳ್ಳಬಹುದು" ಎಂದಳು.

ಅವರು "ಎಲ್ಲಮ್ಮ, ಎಂಥವು ಅವು? ತೋರಿಸು ನೋಡೋಣ" ಎಂದರು.

ಅವಳು ಅವರನ್ನು ಹಿತ್ತಲಿಗೆ ಕರೆದುಕೊಂಡು ಹೋಗಿ, "ಅದೋ – ಆ ದಾಳಿಂಬೆಯ ಮರದ ಬುಡದ ಬಳಿ ಅಗೆಯಿರಿ. ಅಲ್ಲಿ ಒಂದು ಡಬ್ಬಿಯಲ್ಲಿ ಇವೆ ಅವು. ನಾನು ಅವನ್ನು ಮುಟ್ಟುವುದಿಲ್ಲ" ಎಂದಳು.

ಅವರು ಅವಳು ತೋರಿಸಿದ ಕಡೆ ನೆಲವನ್ನು ತೋಡಿ ಡಬ್ಬಿಯನ್ನು ಹೊರಕ್ಕೆ ತೆಗೆದರು. ಅವರಲ್ಲಿದ್ದ ಹಿತ್ತಾಳೆ ಎಂತಹುದೆಂದು ಗೊತ್ತಾದ ಕೂಡಲೆ ಅವರು ಬಹು ಸಂತೋಷದಿಂದ ಅವಳಿಗೆ ಅನೇಕ ಗಾಜಿನ ಗೊಂಬೆಗಳನ್ನೂ ತಟ್ಟೆ ಬಟ್ಟಲುಗಳನ್ನೂ ಕೊಟ್ಟು ಅದಕ್ಕೆ ಬದಲಾಗಿ ಅಷ್ಟು ಚಿನ್ನವನ್ನೂ ತೆಗೆದು ಕೊಂಡು ಉತ್ಸಾಹದಿಂದ ಮುಂದಕ್ಕೆ ಹೋದರು.

ಸಿದ್ದಮ್ಮ ಅತಿಶಯವಾದ ಸಡಗರದಿಂದ ಆ ಗಾಜಿನ ಪದಾರ್ಥಗಳನ್ನು ಮನೆಯ ಹಜಾರದಲ್ಲಿ ಸಾಲಾಗಿ ಇಟ್ಟು ಗಂಡನ ಬರವನ್ನೇ ಎದುರುನೋಡುತ್ತ ಕುಳಿತಳು.

ಮುದ್ದಣ್ಣ ಹಿಂದಿರುಗಿ ಬಂದಾಗ, "ಸಿದ್ದಿ, ಏನು ಇವೆಲ್ಲಾ? ಎಲ್ಲಿದ್ದವು?" ಎಂದು ಕುತೂಹಲದಿಂದ ಪ್ರಶ್ನಿಸಿದ.

ಅವಳು "ನೋಡು—ಇಷ್ಟೊಂದು ಪದಾರ್ಥಗಳನ್ನೂ ನೀನು ಮರದ ಕೆಳಗೆ ಹೂಳಿಟ್ಟಿದ್ದ ಹಿತ್ತಾಳೆಯ ಚೂರುಗಳನ್ನು ಕೊಟ್ಟು ಕೊಂಡುಕೊಂಡೆ, ಏನು ಹೇಳುತ್ತೀಯ? ಒಳ್ಳೆಯ ಲಾಭವಲ್ಲವೆ? ಆದರೆ ಅವನ್ನು ನಾನು ಮುಟ್ಟಲಿಲ್ಲ. ನಾನು ಅವುಗಳ ತಂಟೆಗೆ ಹೋಗುವುದಿಲ್ಲವೆಂದು ನಿನಗೆ ಕೊಟ್ಟಿದ್ದ ಮಾತಿನಂತೆ ನಡೆದುಕೊಂಡೆ. ದೂರದಲ್ಲಿ ನಿಂತುಕೊಂಡು ಆ ಸ್ಥಳವನ್ನು ಅವರಿಗೆ ತೋರಿಸಿದೆ. ಅವರೇ ನೆಲವನ್ನು ಅಗೆದು ಅವನ್ನು ತೆಗೆದುಕೊಂಡರು" ಎಂದು ಏನೋ ದಿಗ್ವಿಜಯ ಮಾಡಿದವಳ ಹಾಗೆ ಹೆಮ್ಮೆಯಿಂದ ಹೇಳಿದಳು.

ಮುದ್ದಣ್ಣ "ಸಿದ್ದಿ! ಸಿದ್ದಿ! ಏನು ಬೆಪ್ಪಿಯೋ ನೀನು! ಎಂಥ ಕೆಲಸ ಮಾಡಿಬಿಟ್ಟೆಯಲ್ಲವೆ! ಆ ಚೂರುಗಳು ಹಿತ್ತಾಳೆಯವಲ್ಲ, ಚಿನ್ನದವು. ನಾನು ವರುಷಗಟ್ಟಳೆ ದುಡಿದು ಕೂಡಿಟ್ಟಿದ್ದುದನ್ನೆಲ್ಲಾ ಒಂದು ಕ್ಷಣದಲ್ಲಿ ಇಲ್ಲ ಎನ್ನಿಸಿ ಬಿಟ್ಟಿದ್ದೀಯಲ್ಲೇ!" ಎಂದ.

ಅವಳು "ನನಗೇನು ಗೊತ್ತು ಅದು ಹೀಗಾಗುತ್ತೆ ಅಂತ? ನೀನು ಮೊದಲೇ ಹೇಳಬೇಕಾಗಿತ್ತು!" ಎಂದು ತಪ್ಪನ್ನು ಅವನ ಮೇಲೆಯೇ ಹೇರಿದಳು.

ಒಂದೆರಡು ನಿಮಿಷ ಏನೋ ಯೋಚಿಸುವವಳಂತೆ ಸುಮ್ಮನಿದ್ದು ಅನಂತರ ಸಿದ್ದಮ್ಮ "ಇಲ್ಲಿ ಕೇಳು, ನಾವು ಆ ಚಿನ್ನವನ್ನೆಲ್ಲಾ ಹಿಂದಕ್ಕೆ ಪಡೆಯ

ಒಹುದು. ಆ ಕಳ್ಳರನ್ನು ಅಟ್ಟಿಸಿಕೊಂಡು ಹೋಗೋಣ. ಇನ್ನೂ ಬಹಳ ದೂರ ಹೋಗಿರಲಾರರು" ಎಂದಳು.

ಮುದ್ದಣ್ಣ "ಅದೂ ಆಗಲಿ. ನಮ್ಮ ಅದೃಷ್ಟ ಹೇಗಾಗುತ್ತೋ ನೋಡಿಯೇಬಿಡೋಣ. ವಾಪಸು ಬರುವುದಕ್ಕೆ ಎಷ್ಟು ಹೊತ್ತಾಗುತ್ತದೆಯೋ ಏನೋ. ದಾರಿಯಲ್ಲಿ ತಿನ್ನುವುದಕ್ಕೆ ಒಂದಿಷ್ಟು ಬುತ್ತಿ ಕಟ್ಟಿಕೊ" ಎಂದ.

ಸಿದ್ದಮ್ಮ ಎರಡು ರೊಟ್ಟಿಗಳನ್ನೂ ಉಪ್ಪಿನ ಕಾಯನ್ನೂ ಒಂದು ದೊಡ್ಡ ಮುದ್ದೆ ಬೆಣ್ಣೆಯನ್ನೂ ಒಂದು ಬಟ್ಟೆಯಲ್ಲಿ ಕಟ್ಟಿಕೊಂಡಳು. ಹಿತ್ತಲಿನ ಮರದಲ್ಲೇ ಬಿಟ್ಟಿದ್ದ ಎರಡು ದಾಳಿಂಬೆಯ ಹಣ್ಣುಗಳಿದ್ದವು. ಹೊರಡುವಾಗ ಅವನ್ನೂ ಗಂಟಿನೊಳಕ್ಕೆ ತುರುಕಿದಳು.

ಮುದ್ದಣ್ಣ ಹೆಂಡತಿಗಿಂತಲೂ ಬಹಳ ವೇಗವಾಗಿ ನಡೆದ. ಕ್ರಮೇಣ ಅವಳು ಅವನಿಗಿಂತಲೂ ಸುಮಾರು ದೂರವೇ ಹಿಂದೆ ಬಿದ್ದಳು. ಆದರೆ ಅದರಿಂದ ಅವಳಿಗೆ ವ್ಯಸನವಾಗಲಿಲ್ಲ. "ಹೋದರೆ ಹೋಗಲಿ. ಹಿಂದಿರುಗಿ ಬರುವಾಗ ನಾನೇ ಮುಂದಾಗುತ್ತೇನೆ; ನಾನೇ ಮೊದಲು ಮನೆಯನ್ನು ಸೇರಬಹುದು" ಎಂದುಕೊಂಡು ನಿಧಾನವಾಗಿಯೇ ನಡೆದಳು.

ಸ್ವಲ್ಪ ಹೊತ್ತಿನಲ್ಲೇ ಅವಳು ಒಂದು ದಿಣ್ಣೆಯ ನೆತ್ತಿಯ ಮೇಲಕ್ಕೆ ಬಂದು ನಿಂತಳು. ದಾರಿ ಆ ದಿಣ್ಣೆಯನ್ನು ಒಂದು ಕಡೆ ಏರಿ ಇನ್ನೊಂದು ಕಡೆ ಇಳಿದು ಹೋಗುತ್ತಿತ್ತು. ಅಲ್ಲಿ ದಾರಿಯ ಪಕ್ಕದಲ್ಲಿ ಒಂದೆರಡು ಮರಗಳು ಇದ್ದವು. ಯಾರೋ ಗಾಡಿಗಳಲ್ಲಿ ಹೋಗುವವರು ಆ ಮರಗಳಿಗೆ ತೀರ ಹತ್ತಿರವಾಗಿ ಗಾಡಿಗಳನ್ನು ಬಿಟ್ಟುಕೊಂಡು ಹೋಗಿದ್ದರೆಂದು ತೋರುತ್ತದೆ. ಅವುಗಳ ತೊಗಟೆ ಗಾಡಿಗಳ ಚಕ್ರಗಳಿಗೆ ತಾಕಿ ತರಿದು ಹೋಗಿತ್ತು. ಇದನ್ನು ನೋಡಿ ಸಿದ್ದಮ್ಮನಿಗೆ ಅಯ್ಯೋ ಅನ್ನಿಸಿತು. "ಯಾರೋ ಕಲ್ಲೆದೆಯವರು ಮರಗಳಿಗೆ ಹೇಗೆ ಗಾಯ ಮಾಡಿದ್ದಾರೆ! ಎಷ್ಟು ನೋವಾಗುತ್ತಿದೆಯೋ ಏನೋ! ಪಾಪ!" ಎಂದುಕೊಂಡು ಅವಳು ತನ್ನ ಕೈಯಲ್ಲಿದ್ದ ಬುತ್ತಿಯ ಗಂಟನ್ನು ಬಿಚ್ಚಿ, ಅದರಲ್ಲಿದ್ದ ಬೆಣ್ಣೆಯ ಮುದ್ದೆಯನ್ನು ಈಚೆಗೆ ತೆಗೆದು, ಅದನ್ನು ಆ ಮರಗಳಿಗೆ, ತೊಗಟೆ ಸುಲಿದುಹೋಗಿದ್ದ ಕಡೆ, ಸವರಿದಳು. ಅವಳು ತಂದಿದ್ದ ಬೆಣ್ಣೆ ಒಂದು ಮರಕ್ಕೆ ಕೂಡ ಸರಿಯಾಗಿ ಸಾಕಾಗಲಿಲ್ಲ.

ಇಷ್ಟರಲ್ಲಿ ಇನ್ನೊಂದು ಕೆಲಸವಾಯಿತು. ಬೆಣ್ಣೆ ಸವರುವುದಕ್ಕೆಂದು ಅವಳು ಬುತ್ತಿಯ ಗಂಟನ್ನು ನೆಲದ ಮೇಲಿಟ್ಟಿದ್ದಳು. ಅದು ದಿಣ್ಣೆಯಷ್ಟೆ. ನೆಲ ಇಳಿಜಾರಾಗಿತ್ತು. ಆದ್ದರಿಂದ ಗಂಟಿನಲ್ಲಿದ್ದ ಒಂದು ದಾಳಿಂಬೆ ಹಣ್ಣು ಮೆಲ್ಲಗೆ ಹೊರಕ್ಕೆ ಬಂದು ಸದ್ದುಮಾಡದೆ ಉರುಳಿ ಉರುಳಿ ಕೆಳಕ್ಕೆ ಓಡಿತು. ಸಿದ್ದಮ್ಮ ತಿರುಗಿ ನೋಡುವ ಹೊತ್ತಿಗೆ ಅದು ಹತ್ತಾರು ಮಾರು ಆಚೆ ಇತ್ತು. ಅವಳು ಅದರ ಜೊತೆಗಾರನಾದ ಇನ್ನೊಂದು ದಾಳಿಂಬೆ ಹಣ್ಣನ್ನೂ ಕೈಗೆ ತೆಗೆದು ಕೊಂಡು "ನೀನೂ ಹೋಗು. ನಿಮ್ಮ ಅಣ್ಣನನ್ನು ಹುಡುಕಿಕೊಂಡು ಬಾ" ಎಂದು ಅದನ್ನು ತಾನೇ ಉರುಳಿಬಿಟ್ಟಳು. ಅದು ಮೊಲದ ಹಾಗೆ ಚಿಮ್ಮಿ ಎಲ್ಲೋ ಹುದುಗಿಕೊಂಡಿತು. ಅವಳು ಅವೆರಡೂ ಹೋದ ದಿಕ್ಕಿನಲ್ಲಿ ಕೆಲವು ಕ್ಷಣ ನೋಡುತ್ತ ನಿಂತಿದ್ದು, ಅನಂತರ "ಅವಕ್ಕೇನು ದಾರಿ ಗೊತ್ತಿಲ್ಲವೆ? ಬರುತ್ತವೆ. ಅವಕ್ಕೆ ಕಾದುಕೊಂಡು ನಾನು ಇಲ್ಲಿ ದಿನವೆಲ್ಲಾ ನಿಂತಿರುವುದ ಕ್ಕಾಗುತ್ತದೆಯೆ?" ಎಂದು ಗೊಣಗಿಕೊಳ್ಳುತ್ತ ಮುಂದಕ್ಕೆ ಹೆಜ್ಜೆ ಹಾಕಿದಳು.

ಕೊನೆಗೆ ಹೇಗೋ ಅವಳು ಗಂಡನ ಸಮುಕ್ಕೇ ಬಂದಳು. ಅವನು ತಿನ್ನುವುದಕ್ಕೆ ಏನಾದರೂ ಬೇಕು ಎಂದ. ಅವಳು ಬುತ್ತಿಯ ಗಂಟಿನಲ್ಲಿ ಉಳಿದಿದ್ದ ಒಣಕಲು ರೊಟ್ಟಿ ಉಪ್ಪಿನಕಾಯಿಗಳನ್ನು ಕೊಟ್ಟಳು. ಅವನು "ಏಕೆ? ಬೆಣ್ಣೆ ತರಲಿಲ್ಲವೆ?" ಎಂದ. ಅವಳು "ತರದೇ ಉಂಟೆ? ಒಂದು ದೊಡ್ಡ ಮುದ್ದೆಯನ್ನೇ ತಂದಿದ್ದೆ. ದಾರಿಯಲ್ಲಿ ಗಾಡಿಗಳ ಗಾಲಿಗಳ ತಿಕ್ಕಾಟಕ್ಕೆ ಸಿಕ್ಕು ಗಾಯವಾಗಿದ್ದ ಆ ಬಡ ಮರಗಳನ್ನು ನೋಡಿ ಅಯ್ಯೋ ಅನ್ನಿಸಿತು. ಅವಕ್ಕೆ ತಣ್ಣಗಾಗಲಿ ಎಂದು ಬೆಣ್ಣೆಯನ್ನೆಲ್ಲಾ ಅವುಗಳ ಚರ್ಮ ಸುಲಿದಿದ್ದ ಕಡೆ ಸವರಿದೆ. ಎರಡು ದಾಳಿಂಬೆ ಹಣ್ಣುಗಳನ್ನು ಬೇರೆ ತಂದಿದ್ದೆ. ನಾನು ಮರಕ್ಕೆ ಬೆಣ್ಣೆ ಬಳಿಯುತ್ತಿದ್ದಾಗ ಅವುಗಳಲ್ಲಿ ಒಂದು ಉರುಳಿಹೋಯಿತು. ಅದನ್ನು ಹುಡುಕಿಕೊಂಡು ಬರಲಿ ಎಂದು ಇನ್ನೊಂದನ್ನೂ ಕಳಿಸಿದೆ. ಬಹುಶಃ ಇಷ್ಟು ಹೊತ್ತಿಗೆ ಎರಡೂ ಒಟ್ಟಿಗೆ ನಾವು ಬಂದ ದಾರಿಯಲ್ಲೇ ಬರುತ್ತಿರಬಹುದು" ಎಂದಳು.

ಮುದ್ದಣ್ಣ "ನೀನೊಂದು ಕತ್ತೆ" ಎಂದ.

ಅವಳು "ಅದೇಕೆ ಹಾಗೆನ್ನುತ್ತೀಯ? ನಾನೇಕೆ ಕತ್ತೆಯಾದೇನು? ಹೀಗೆಲ್ಲಾ ಮಾಡಕೂಡದು ಎಂತ ನೀನೇನು ಹೇಳಿದ್ದೆಯಾ ನನಗೆ?" ಎಂದಳು.

ಇಬ್ಬರೂ ಒಂದೊಂದು ಒಣ ರೊಟ್ಟಿಯನ್ನೇ ತಿಂದರು. ಮುದ್ದಣ್ಣ "ಸಿದ್ದಿ, ಬರುವಾಗ ಮನೆಯ ಬಾಗಿಲನ್ನು ಭದ್ರಮಾಡಿ ಬಂದೆ ತಾನೆ?" ಎಂದ.

ಅವಳು "ಇಲ್ಲ. ನನಗೇನು ಗೊತ್ತು? ನೀನು ಹೇಳಲಿಲ್ಲ, ನಾನು ಮಾಡಲಿಲ್ಲ!" ಎಂದಳು.

ಅವನು "ಹಾಗಾದರೆ ಹೋಗು. ಮೊದಲು ಭದ್ರಮಾಡಿಬಿಟ್ಟು ಬಾ. ಬರುವಾಗ ತಿನ್ನುವುದಕ್ಕೆ ಇನ್ನೇನಾದರೂ ಇದ್ದರೆ ತೆಗೆದುಕೊಂಡು ಬಾ. ನೀನು ಬರುವ ವರೆಗೂ ನಾನು ಇಲ್ಲೇ ಇರುತ್ತೇನೆ" ಎಂದ.

ಸಿದ್ದಮ್ಮ ಮನೆಯ ದಿಕ್ಕಿನಲ್ಲಿ ನಡೆದಳು. ಅವಳು ಮನೆಯನ್ನು ಸೇರುವ ಸಮಯಕ್ಕೆ ಸರಿಯಾಗಿ ಒಬ್ಬ ಮುದುಕಿ ಒಂದು ಬುಟ್ಟಿಯ ತುಂಬ ನೇರಳೆ ಹಣ್ಣುಗಳನ್ನು ಮಾರುವುದಕ್ಕೆ ತಂದಳು. ಸಿದ್ದಮ್ಮನಿಗೆ ನೇರಳೆ ಹಣ್ಣೆಂದರೆ ಬಹಳ ಆಸೆ. ಈಗ ಮುದ್ದಣ್ಣ ಬೇರೆ ಬರುವಾಗ ತಿನ್ನುವುದಕ್ಕೆ ಇನ್ನೇನಾದರೂ ಇದ್ದರೆ ತೆಗೆದುಕೊಂಡು ಬಾ ಎಂದು ಹೇಳಿದ್ದ. ಮನೆಯಲ್ಲಿ ಇನ್ನೇನೂ ಇರಲಿಲ್ಲ. ಆದ್ದರಿಂದ ಅವಳು ಒಂದು ಸೇರು ರಾಗಿಯನ್ನು ಕೊಟ್ಟು ಅದಕ್ಕೆ ಬದಲಾಗಿ ಎಂಟು ಹತ್ತು ಬೊಗಸೆಗಳಷ್ಟು ನೇರಳೆ ಹಣ್ಣನ್ನು ಮುದುಕಿಯಿಂದ ಕೊಂಡಳು. ಅವನ್ನು ನೋಡಿದರೆ ಗಂಡ ಬಹಳ ಸಂತೋಷಪಡುತ್ತಾನೆ, ಒಂದು ಸಾರಿಯಾದರೂ ತನ್ನನ್ನು ಬುದ್ಧಿವಂತಳೆಂದು ಹೊಗಳುತ್ತಾನೆ ಎಂದು ಊಹಿಸಿ ಹಿಗ್ಗಿದಳು.

ಅನಂತರ ಮನೆಯನ್ನು ಪ್ರವೇಶಿಸಿ, ಅವಳು ಹಿತ್ತಲ ಕಡೆಯ ಬಾಗಿಲಿಗೆ ಅಗಳಿಯನ್ನು ಹಾಕಿದಳು. ತಾನು ಕೊಂಡುಕೊಂಡಿದ್ದ ನೇರಳೆ ಹಣ್ಣುಗಳನ್ನೆಲ್ಲಾ ಒಂದು ಬಟ್ಟೆಯಲ್ಲಿ ಗಂಟು ಕಟ್ಟಿಕೊಂಡು ಕುಡಿಯುವುದಕ್ಕೆ ಒಂದು ದೊಡ್ಡ ತಂಬಿಗೆಯ ತುಂಬ ನೀರನ್ನು ತೆಗೆದುಕೊಂಡು ಮುಂಬಾಗಿಲಿಗೆ ಬಂದಳು. ಆಗ ಅವಳಿಗೆ ಮುದ್ದಣ್ಣ "ಬಾಗಿಲನ್ನು ಭದ್ರ ಮಾಡಿಟ್ಟು ಬಾ" ಎಂದು ಹೇಳಿದ್ದ ಮಾತು ನೆನಪಾಯಿತು. ಮುಂಬಾಗಿಲು ತಾನೇ ಮನೆಗೆಲ್ಲಾ ಮುಖ್ಯವಾದದ್ದು? ಅದನ್ನು ಭದ್ರ ಮಾಡಬೇಕಾದರೆ ಅದನ್ನು ಅದರ ಸ್ಥಳದಿಂದ ಕಿತ್ತು ತನ್ನ ತಲೆಯ ಮೇಲೆ ಹೊತ್ತುಕೊಂಡು ಹೋಗುವುದೇ ಸರಿಯಾದ ಕ್ರಮ ಎಂದು ಅವಳಿಗೆ ತೋರಿತು. ಇಲ್ಲಿ ಬಿಟ್ಟು ಹೋದರೆ ಅದು ಅಪಾಯಕ್ಕೆ ಗುರಿಯಾಗಬಹುದು. ತನ್ನ ಜೊತೆಯಲ್ಲೇ ತೆಗೆದುಕೊಂಡು

ಹೋಗಿಬಿಟ್ಟರೆ ಅವಕ್ಕೆ ಯಾವ ಭಯವೂ ಇಲ್ಲ, ಕ್ಷೇಮವಾಗಿರುತ್ತದೆ ಎಂದು ಅವಳು ಭಾವಿಸಿದಳು. ಆ ಭಾವನೆ ಅವಳ ಮನಸ್ಸಿಗೆ ಬಂದದ್ದೇ ತಡ, ಕಾರ್ಯತಃ ಅದರಂತೆ ನಡೆದೇಬಿಟ್ಟಳು. ಬಾಗಿಲನ್ನು ತಲೆಯ ಮೇಲಿಟ್ಟು ಕೊಂಡು ಕೈಗಳಲ್ಲಿ ನೇರಳೆ ಹಣ್ಣುಗಳ ಗಂಟನ್ನೂ ನೀರಿನ ತಂಬಿಗೆಯನ್ನೂ ಹಿಡಿದುಕೊಂಡು ಮತ್ತೆ ಮುದ್ದಣ್ಣ ಇದ್ದೆಡೆಗೆ ಹೊರಟಳು.

ಮುದ್ದಣ್ಣ ಹೆಂಡತಿ ಹಿಂದಿರುಗಿ ಬರುವುದನ್ನೇ ನಿರೀಕ್ಷಿಸುತ್ತ ಕಾತರ ನಾಗಿ ನಿಂತಿದ್ದ. ಅವನನ್ನು ನೋಡಿದ ಕೂಡಲೇ ದೂರದಿಂದಲೇ ಸಿದ್ದಮ್ಮ "ಇಗೋ, ಬಾಗಿಲನ್ನು ಭದ್ರವಾಗಿ ತಂದಿದ್ದೇನೆ. ಇನ್ನು ನೀನು ಎಷ್ಟು ಜೋಪಾನವಾಗಿ ಬೇಕಾದರೂ ನೋಡಿಕೊ" ಎಂದು ಏನೋ ಮಹಾಶ್ಚರ್ಯ ಸಾಧಿಸಿದ್ದವಳ ಹಾಗೆ ಹೆಮ್ಮೆಯಿಂದ ಹೇಳಿದಳು.

ಮುದ್ದಣ್ಣ "ಅಯ್ಯೋ, ದೇವರೇ! ಎಂಥ ಬುದ್ಧಿವಂತಳಾದ ಹೆಂಡತಿ ಸಿಕ್ಕಿದ್ದಾಳೆ ನನಗೆ! ಮನೆಯ ಬಾಗಿಲನ್ನು ಭದ್ರವಾಗಿ ಹಾಕಿಕೊಂಡು ಬಾ ಎಂದು ಕಳುಹಿಸಿದರೆ ಬಾಗಿಲನ್ನೇ ಕಿತ್ತು ತಂದಿದ್ದೀಯ! ಅಯ್ಯೋ, ನಿನ್ನ ಜಾಣತನವೆ!" ಎಂದು ಹಳಿದು, ಅನಂತರ "ಹೂ! ಆದದ್ದು ಆಗಿಹೋಗಿತು! ಈಗ ಈ ಬಾಗಿಲನ್ನು ನನ್ನನ್ನು ಕೇಳದೆ ನೀನೇ ತಂದಿರುವುದರಿಂದ ನೀನೇ ಹೊರಬೇಕು ' ಅದೇ ನಿನಗೆ ಸರಿಯಾದ ಶಿಕ್ಷೆ" ಎಂದ.

ಅವಳು "ಆಗಬಹುದು. ಬಾಗಿಲನ್ನೇನೋ ನಾನೇ ಹೊರುತ್ತೇನೆ. ಆದರೆ ಗಂಟನ್ನು ನಿನಗಾಗಿ ತಂದದ್ದು. ಇವನ್ನೂ ನಾನೇ ತೆಗೆದುಕೊಳ್ಳಲಾರೆ. ಒಬ್ಬಳೇ ಎಷ್ಟು ಅಂತ ಹೊರುವುದಕ್ಕೆ ಸಾಧ್ಯ? ಬೇಕಾದರೆ ಅದನ್ನೂ ತಂಬಿಗೆ ಯನ್ನೂ ಈ ಬಾಗಿಲ ಮೇಲೆ ಇಡು" ಎಂದಳು.

ಮುದ್ದಣ್ಣ ಸಂತೋಷದಿಂದ ಹಾಗೆಯೇ ಮಾಡಿದ. ಇಬ್ಬರೂ ಕಳ್ಳರನ್ನು ಹುಡುಕಿಕೊಂಡು ಮುಂದುವರಿದರು.

ಸಾಯಂಕಾಲದ ಹೊತ್ತಿಗೆ ಅವರು ಒಂದು ಅರಣ್ಯದಲ್ಲಿದ್ದರು. ಅದು ವರೆಗೂ ಎಲ್ಲೆಲ್ಲಿ ನೋಡಿದರೂ ಕಳ್ಳರ ಸುಳಿವೇ ಕಂಡುಬಂದಿರಲಿಲ್ಲ. ಅಷ್ಟರಲ್ಲಿ ಕತ್ತಲಾಯಿತು. ರಾತ್ರಿಯನ್ನು ಕಾಡಿನ ಮೃಗಗಳ ಕಾಟವಿಲ್ಲದೆ ಕಳೆಯುವ ಉದ್ದೇಶದಿಂದ ಅವರು ಒಂದು ಮರವನ್ನು ಹತ್ತಿ ಕೊಂಬೆಗಳ ಮಧ್ಯೆ

ಕುಳಿತರು. ಬಾಗಿಲು ಸಿದ್ದಮ್ಮನ ತಲೆಯ ಮೇಲೆಯೇ ಸುಖವಾಗಿ ಸವಾರಿ ಮಾಡುತ್ತಿತ್ತು.

ಅವರು ಮರವನ್ನೇರಿ ಕುಳಿತು ಕಾಲು ಗಂಟೆಯಾಗಲಿಲ್ಲ — ಕೆಳಗಡೆ ಯಾರೋ ಮನುಷ್ಯರು ಬಂದರು. ಅವರು ಯಾರು ಎನ್ನುತ್ತೀರಿ? ಇವರ ಮನೆಯ ಹಿತ್ತಲಿನಲ್ಲಿದ್ದ ಚಿನ್ನದ ಚೂರುಗಳನ್ನೆಲ್ಲಾ ತೆಗೆದುಕೊಂಡು ಅವಕ್ಕೆ ಪ್ರತಿಯಾಗಿ ಕೆಲವು ಕೆಲಸಕ್ಕೆ ಬಾರದ ಗಾಜಿನ ಪದಾರ್ಥಗಳನ್ನು ಕೊಟ್ಟು ಹೋಗಿದ್ದ ಕಳ್ಳರೇ ಅವರು! ಅವರು ಎಲ್ಲಿಂದಲೋ ಬಂದು ಅಕಸ್ಮಾತ್ತಾಗಿ ಅದೇ ಮರದ ಕೆಳಗೇ ಕುಳಿತುಕೊಂಡು ಮಾತಿನಲ್ಲಿ ಮಗ್ನರಾದರು.

ಸ್ವಲ್ಪ ಹೊತ್ತಿನಲ್ಲೇ ರೊಯ್ಯನೆ ಗಾಳಿ ಬೀಸತೊಡಗಿತು. ಆ ವೇಳೆಗೆ ಬಾಗಿಲಿನ ಭಾರದಿಂದ ಸಿದ್ದಮ್ಮನಿಗೆ ಕತ್ತು ನೋವು ಶುರುವಾಯಿತು. ಅವಳು ಬಾಗಿಲಿನ ಮೇಲೆ ನೇರಳೆ ಹಣ್ಣಿನ ಗಂಟೂ ನೀರಿನ ತಂಬಿಗೆಯೂ ಇದ್ದುದರಿಂದ ಅದು ಅಷ್ಟು ಭಾರವಾಗಿದ್ದಿತೆಂದು ಯೋಚಿಸಿ, ಮೆಲ್ಲನೆ "ಈ ಗಂಟನ್ನೂ ತಂಬಿಗೆಯನ್ನೂ ಕೆಳಕ್ಕೆ ಎಸೆದುಬಿಡುತ್ತೇನೆ. ಕತ್ತು ಉಳುಕುವ ಹಾಗೆ ಆಗಿದೆ" ಎಂದಳು.

ಮುದ್ದಣ್ಣ "ಎಲ್ಲಾದರೂ ಉಂಟೆ? ನಾವು ಇಲ್ಲಿರುವುದು ಅವರಿಗೆ ಗೊತ್ತಾಗಿಹೋಗುತ್ತದೆ" ಎಂದ.

ಅವಳು "ಇಲ್ಲ. ಇನ್ನು ನನ್ನಿಂದ ಸಾಧ್ಯವಿಲ್ಲ" ಎಂದು ಒಂದು ಕೈಯಿಂದ ಮೊದಲು ತಂಬಿಗೆಯನ್ನು ಎಳೆದುಕೊಂಡು ನೀರನ್ನು ಕೆಳಕ್ಕೆ ಸುರಿದಳು. ಅದು ಹನಿಹನಿಯಾಗಿ ತುಂತುರು ತುಂತುರಾಗಿ ಕಳ್ಳರ ಮೇಲೆ ಬಿತ್ತು. ಅವರು "ಮಳೆ ಆರಂಭವಾಯಿತು. ಜೋರಾಗಿಬಿಟ್ಟರೆ ಏನು ಗತಿ?" ಎಂದು ಕಳವಳಪಟ್ಟರು. ಅಷ್ಟರಲ್ಲಿ ಸಿದ್ದಮ್ಮ ನೇರಳೆ ಹಣ್ಣುಗಳನ್ನು ಒಂದೊಂದಾಗಿ ಎರಡೆರಡಾಗಿ ಅವರ ಮೇಲೆ ಬೀರಿದಳು. "ಓಹೋ, ಆನೆಕಲ್ಲು ಜೋರೆ ಬೀಳುತ್ತಿದೆ! ಎಲ್ಲಾದರೂ ಬಂಡೆಗಿಂಡೆಯ ಮರೆ ಇರುವ ಕಡೆ ಹೋಗಿ ನಿಂತುಕೊಳ್ಳೋಣ" ಎಂದು ಅವರಲ್ಲಿ ಒಬ್ಬ ಇತರರನ್ನು ಎಚ್ಚರಿಸಿದ.

ನೇರಳೆ ಹಣ್ಣುಗಳೆಲ್ಲಾ ಮುಗಿಯುವ ಹೊತ್ತಿಗೆ ಸಿದ್ದಮ್ಮನ ತಲೆ ಇನ್ನಷ್ಟು ನೋವನ್ನು ಅನುಭವಿಸಿತ್ತು. ಆಗ ಹೊಳೆಯಿತು ಅವಳಿಗೆ— ಅಷ್ಟು ಹೊತ್ತೂ ಭಾರವಾಗಿದ್ದುದು ಬಾಗಿಲೇ ಹೊರತು ಗಂಟಲ್ಲ ಎಂದು.

ಆದ್ದರಿಂದ ಆವಳು ಬಾಗಿಲನ್ನು ಇದ್ದಕ್ಕಿದ್ದಂತೆಯೇ ದೊಪ್ಪನೆ ಕೆಳಕ್ಕೆ ಎಸೆದಳು. ಮುದ್ದಣ್ಣನಿಗೆ ಗಾಬರಿಯಿಂದ ಮೈಯೆಲ್ಲಾ ನಡುಕ ಹುಟ್ಟಿತು. ಆದರೆ ಅವನು ಹೆದರಬೇಕಾದ ಅಗತ್ಯವೇ ಇರಲಿಲ್ಲ. ಏಕೆಂದರೆ ಕಳ್ಳರು ಅವನಿಗಿಂತಲೂ ಹೆಚ್ಚಾಗಿ ಬೆಚ್ಚಿಬಿದ್ದರು. ಅವರೆಲ್ಲರೂ ಒಟ್ಟಿಗೆ ಎದ್ದುನಿಂತು "ಆಕಾಶವೇ ತುಂಡುತುಂಡಾಗಿ ಕಳಚಿಬೀಳುತ್ತಿದೆ. ಇಲ್ಲಿದ್ದರೆ ನಮ್ಮ ಪ್ರಾಣ ಉಳಿಯುವುದಿಲ್ಲ!" ಎಂದು ಕೂಗಿಕೊಳ್ಳುತ್ತ ಅಲ್ಲಿಂದ ಕಾಲು ಕಿತ್ತರು. ಓಡಿ ಹೋಗುವ ಭರದಲ್ಲಿ ಅವರು ತಮ್ಮೊಡನೆ ತಂದಿದ್ದ ಗಂಟು ಮೂಟೆಗಳನ್ನೆಲ್ಲಾ ಮರದ ಕೆಳಗಡೆಯೇ ಬಿಟ್ಟಿದ್ದರು.

ಮುದ್ದಣ್ಣನೂ ಸಿದ್ದಮ್ಮನೂ ಇಳಿದು ಬಂದು ಅವನ್ನೆಲ್ಲಾ ಬಿಚ್ಚಿ ಪರೀಕ್ಷಿಸಿದರು. ಒಂದು ಪುಟ್ಟ ಮೂಟೆಯಲ್ಲಿ ಅವರು ಕಳೆದುಕೊಂಡಿದ್ದ ಚಿನ್ನದ ಚೂರುಗಳೆಲ್ಲಾ, ಒಂದೂ ಕಡಿಮೆಯಾಗದೆ, ನೆಮ್ಮದಿಯಾಗಿದ್ದವು.

ಇನ್ನೇನು ಬೇಕು ಇವರಿಗೆ?

# ರಾಕ್ಷಸ ಪುಟ್ಟ

ಒಂದಾನೊಂದು ಕಾಲದಲ್ಲಿ ಒಬ್ಬ ರೈತನಿದ್ದ. ಅವನಿಗೆ ಒಬ್ಬ ಮಗ ಹುಟ್ಟಿದ. ಆ ಹುಡುಗನ ಎತ್ತರ ಎಷ್ಟು ಎನ್ನುತ್ತೀರಿ ? ಒಬ್ಬ ಮನುಷ್ಯನ ಹೆಬ್ಬೆರಳಿನಷ್ಟು ! ವರುಷಗಳೇನೋ ಒಂದರ ಮೇಲೊಂದರಂತೆ ಬಂದು ಹೋದವು. ಅವನು ಮಾತ್ರ ಒಂದು ಕೂದಲೆಳೆಯ ಅಗಲದಷ್ಟು ಕೂಡ ಹೆಚ್ಚಾಗಿ ಬೆಳೆಯಲಿಲ್ಲ. ಆದ್ದರಿಂದ ಅವನನ್ನು ಎಲ್ಲರೂ ಪುಟಾಣಿ ಪುಟ್ಟ ಎಂದು ಕರೆಯುತ್ತಿದ್ದರು.

ಒಂದು ದಿನ ರೈತ ನೊಗಕ್ಕೆ ನೇಗಿಲನ್ನು ಹೂಡಿಕೊಂಡು ಹೊಲಕ್ಕೆ ಹೊರಡಲು ಸಿದ್ಧವಾಗುತ್ತಿದ್ದ. ಹುಡುಗ ಅವನನ್ನು ನೋಡಿ, "ಅಪ್ಪ, ನಾನೂ ಬರುತ್ತೇನೆ" ಎಂದ.

ತಂದೆ "ಬೇಡ. ನೀನು ಮನೆಯಲ್ಲಿರುವುದೇ ಕ್ಷೇಮ. ಹೊರಗೆ ಬಂದರೆ ದನಕರುಗಳ ಕಾಲಿಗೆ ಸಿಕ್ಕಿಬೀಳುವುದು ಖಂಡಿತ. ಇರುವವನು ಒಬ್ಬ ಮಗ. ನಿನಗೆ ಏನಾದರೂ ಆದರೆ ಆಮೇಲೆ ನಾನೇನು ಮಾಡಲಿ ?" ಎಂದ.

ಆದರೆ ಹುಡುಗ ಸುಮ್ಮನಾಗಲಿಲ್ಲ. ತನ್ನನ್ನೂ ಕರೆದುಕೊಂಡೇ ಹೋಗಬೇಕೆಂದು ಹಟ ಹಿಡಿದು ಅಳತೊಡಗಿದ. ಆದುದರಿಂದ ರೈತ ಅವನನ್ನು ತನ್ನ ಅಂಗಿಯ ಜೇಬಿನಲ್ಲಿಟ್ಟುಕೊಂಡು ಹೊಲಕ್ಕೆ ತೆರಳಿದ.

ಹೊಲದಲ್ಲಿ ಉಕ್ಕೆ ಹೊಡೆಯುತ್ತಿರುವಾಗ ರೈತ ಮಗನನ್ನು ಈಚೆಗೆ ತೆಗೆದು ಬದುವಿನ ಹತ್ತಿರ ನೇಗಿಲಿನ ಸಾಲಿನ ಪಕ್ಕದಲ್ಲಿದ್ದ ಒಂದು ಹೆಂಟೆಯ ಮೇಲೆ ಬಿಟ್ಟ. ಹುಡುಗ "ಓಹೋಹೋಹೋ ! ಈ ಬೆಟ್ಟ ಎಷ್ಟು ದೊಡ್ಡದು ! ಇದರ ತುದಿಯಲ್ಲಿ ನಿಂತರೆ ಸುತ್ತ ಎಷ್ಟು ದೂರ ಕಾಣಿಸುತ್ತದೆ ! ಗಾಳಿ ಹೇಗೆ

ಬೀಸುತ್ತದೆ! ಸ್ವಲ್ಪ ಹೊತ್ತು ಇಲ್ಲೇ ಇರುತ್ತೇನೆ!" ಎಂದು ಸಂತೋಷದಿಂದ ಕುಣಿದ.

ಕೆಲವು ನಿಮಿಷಗಳಲ್ಲೇ ಒಬ್ಬ ಭಯಂಕರನಾದ ರಾಕ್ಷಸ ಆ ಕಡೆ ಬಂದ. ಅವನು ಒಂದೊಂದು ಸಾರಿ ಹೆಜ್ಜೆ ಇಟ್ಟರೆ ಇಪ್ಪತ್ತು ಗಜ ಮುಂದುವರಿಯುತ್ತಿದ್ದ. ಅವನ ಕಾಲುಗಳು ಅಷ್ಟು ಉದ್ದವಾಗಿದ್ದವು.

ರಾಕ್ಷಸನನ್ನು ದೂರದಿಂದಲೇ ನೋಡಿ ರೈತನಿಗೆ ಎದೆ ಡವಡವ ಎನ್ನಲು ಆರಂಭಿಸಿತು. ಅವನು ಮಗನಿಗೆ "ಜೋಪಾನವಾಗಿರು. ಇಲ್ಲದಿದ್ದರೆ ಆ ರಾಕ್ಷಸ ನಿನ್ನನ್ನು ಎತ್ತಿಕೊಂಡು ಹೋಗಿಬಿಡುತ್ತಾನೆ!" ಎಂದು ಹೇಳಿ ಹೆದರಿಸಿದ.

ಹುಡುಗ ಅತ್ತಿತ್ತ ಸರಿದಾಡದಿರಲಿ ಎಂದು ರೈತ ಹೀಗೆ ಹೆದರಿಸಿದ್ದು. ಆದರೆ ಮಹಾರಾಯ ಯಾವ ಗಳಿಗೆಯಲ್ಲಿ ಹಾಗೆಂದನೋ, ಅವನ ಮಾತು ನಿಜವೇ ಆಗೋಣವೆ? ರಾಕ್ಷಸ ಹುಡುಗನ ಹತ್ತಿರಕ್ಕೆ ಬಂದು ಅವನನ್ನು ನೋಡಿಯೇಬಿಟ್ಟ! "ಇದೇನೋ ವಿಚಿತ್ರದ ಹುಳು ಇರುವ ಹಾಗಿದೆ" ಎಂದುಕೊಂಡು ಅವನು ಪುಟ್ಟನನ್ನು ಕೈಗೆ ತೆಗೆದುಕೊಂಡು ಪರೀಕ್ಷಿಸಿದ. ಪುಟ್ಟ ವಿಶಾಲವಾದ ಅಂಗೈಯ ಮೇಲೆ ಹಾಗೆ ಹೀಗೆ ಓಡಾಡಿದ. ಇದನ್ನು ಕಂಡು ರಾಕ್ಷಸನಿಗೆ ಬಹಳ ಸಂತೋಷವಾಯಿತು. ಆದ್ದರಿಂದ ಅವನು ಹುಡುಗನನ್ನು ಮತ್ತೆ ಕೆಳಕ್ಕೆ ಬಿಡದೆ ಹಾಗೆಯೇ ಮುಂದಕ್ಕೆ ನಡೆದ. ಪಾಪ, ರೈತನ ಬಾಯಿಂದ ಮಾತೇ ಹೊರಡಲಿಲ್ಲ. ಗಟ್ಟಿಯಾಗಿ ಉಸಿರು ಬಿಟ್ಟರೆ ಎಲ್ಲಿ ರಾಕ್ಷಸ ತನ್ನನ್ನು ತಿಂದುಹಾಕಿಬಿಡುವನೋ ಎಂದು ಅಳುಕಿ ಅಳುಕಿ ಅವನು ಒಂದೊಂದು ಹೆಜ್ಜೆಯಂತೆ ಹಿಂದಕ್ಕೆ ಸರಿದ. ಅಂದಿಗೆ ತನ್ನ ಮಗನ ಗತಿ ಮುಗಿಯಿತು, ತನಗೂ ಅವನಿಗೂ ಋಣ ತೀರಿತು, ಇನ್ನು ತಾನು ಅವನನ್ನು ನೋಡುವುದಿಲ್ಲ ಎಂದು ಅವನು ತೀರ್ಮಾನಿಸಿದ.

ಆದರೆ ಆ ಮಗನಿಗೆ ಏನೂ ಆಗಲಿಲ್ಲ. ರಾಕ್ಷಸ ಅವನನ್ನು ಕಾಡಿನ ಮಧ್ಯೆ ಎಲ್ಲೋ ದೂರದಲ್ಲಿದ್ದ ತನ್ನ ಮನೆಗೆ ತೆಗೆದುಕೊಂಡು ಹೋದ. ಅಲ್ಲಿ ಅವನು ದಿನವೂ ಹುಡುಗನನ್ನು ತೊಡೆಯ ಮೇಲೆ ಕೂಡಿಸಿಕೊಂಡು ಆಡಿಸಿ, ಮುದ್ದಿಸಿ, ತಾನು ತಿನ್ನುತ್ತಿದ್ದ ಆಹಾರವನ್ನೇ ಅವನಿಗೂ ಕೊಟ್ಟು ತಿನ್ನಿಸಿದ. ಇದರಿಂದ ಪುಟಾಣಿ ಪುಟ್ಟ ರಾಕ್ಷಸನಂತೆಯೇ ಎತ್ತರವಾಗಿ, ಬಲಶಾಲಿಯಾಗಿ, ಪ್ರಚಂಡನಾಗಿ ಬೆಳೆದ.

ಎರಡು ವರ್ಷ ಹೀಗೆಯೇ ಕಳೆದವು. ಅನಂತರ ಒಂದು ದಿನ ರಾಕ್ಷಸ ಅವನನ್ನು ಪರೀಕ್ಷಿಸಬೇಕೆಂದು ಉದ್ದೇಶಿಸಿ ಒಂದು ದೊಡ್ಡ ತೇಗದ ಮರವನ್ನು ತೋರಿಸಿ, "ಎಲ್ಲಿ, ಈ ಮರವನ್ನು ಕೀಳು, ನೋಡೋಣ" ಎಂದ.

ಪುಟ್ಟ ಹಿಂದುಮುಂದು ನೋಡದೆ ಅದನ್ನು ಬುಡಸಮೇತ ಕಿತ್ತೇಬಿಟ್ಟ. ರಾಕ್ಷಸರ ಆಹಾರವನ್ನು ತಿಂದಿದ್ದುದರ ಫಲವಾಗಿ ಅವನಿಗೆ ಅಷ್ಟು ಬಲ ಬಂದಿತ್ತು.

ರಾಕ್ಷಸ ಪುಟ್ಟನನ್ನು ಇದಕ್ಕಿಂತಲೂ ಹೆಚ್ಚು ಶಕ್ತಿವಂತನಾಗಿ ಮಾಡ ಬೇಕೆಂದು ನಿಶ್ಚಯಿಸಿದ. ಆದುದರಿಂದ ಅವನು ಅವನನ್ನು ಇನ್ನೆರಡು ವರ್ಷಗಳು ಪೋಷಿಸಿದ.

ಅನಂತರ ಒಂದು ದಿನ ರಾಕ್ಷಸ ಪುಟ್ಟನನ್ನು ಪರೀಕ್ಷಿಸುವ ಸಲುವಾಗಿ ಅವನನ್ನು ಕಾಡಿನಲ್ಲೆಲ್ಲಾ ಅತಿ ದಟ್ಟವಾದ ಪ್ರದೇಶಕ್ಕೆ ಕರೆದುಕೊಂಡು ಹೋದ.

ಪುಟ್ಟ ಈ ಸಾರಿ ಮರಗಳಲ್ಲೆಲ್ಲಾ ಅತ್ಯಂತ ಎತ್ತರವೂ ದಪ್ಪವೂ ಆಗಿದ್ದುದಕ್ಕೆ ಕೈಹಾಕಿ ಅದನ್ನು ನೆಲದಿಂದ ಮೇಲಕ್ಕೆಳೆದ. ಅದೊಂದು ಹುಲ್ಲು ಕಡ್ಡಿಯೋ ಎನ್ನುವಂತೆ ಸುಲಭವಾಗಿತ್ತು ಅವನಿಗೆ ಆ ಕೆಲಸ.

ಇದನ್ನು ಕಂಡ ರಾಕ್ಷಸ "ಭೇಷ್! ಇನ್ನು ನಿನಗೆ ಯಾವ ಭಯವೂ ಇಲ್ಲ. ನಿನ್ನನ್ನು ನೀನು ನೋಡಿಕೊಳ್ಳಬಲ್ಲೆ!" ಎಂದು ಅವನ ಬೆನ್ನು ತಟ್ಟಿದ.

ಆಮೇಲೆ ಕೆಲವು ದಿನಗಳಲ್ಲೇ ರಾಕ್ಷಸ ಪುಟ್ಟನನ್ನು ಅವನ ಊರಿಗೆ ಕರೆದುಕೊಂಡು ಹೋಗಿ, ಮೊದಲು ತಾನು ಅವನನ್ನು ಯಾವ ಹೊಲದಲ್ಲಿ ಕಂಡಿದ್ದನೋ ಅಲ್ಲೇ ಬಿಟ್ಟು ಸ್ವಸ್ಥಾನಕ್ಕೆ ಮರಳಿದ.

ಪುಟ್ಟನ ತಂದೆ ಹಿಂದಿನಂತೆಯೇ ಹೊಲ ಉಳುತ್ತಿದ್ದ. ಪುಟ್ಟ ಅವನ ಬಳಿಗೆ ನಡೆದು "ಅಪ್ಪ, ಇಲ್ಲಿ ನೋಡು. ನಾನು ಯಾರು ಗೊತ್ತೆ? ಏನಪ್ಪ, ನಿನ್ನ ಮಗನ ಗುರುತು ನಿನಗೇ ಮರೆತು ಹೋಯಿತೆ?" ಎಂದ.

ರೈತನಿಗೆ ಗಾಬರಿಯಿಂದ ಮೈಯೆಲ್ಲಾ ನಡುಗಿತು. ಅವನು "ಅಲ್ಲ! ಅಲ್ಲ! ಎಂದಿಗೂ ಅಲ್ಲ! ಎಲ್ಲಾದರೂ ಉಂಟೆ! ನೀನು ಹೇಗೆ ನನ್ನ ಮಗ ನಾದೀಯ? ಖಂಡಿತ ಅಲ್ಲ!" ಎಂದು ಕಿರುಚಿಕೊಂಡ.

ಪುಟ್ಟ "ಹೌದಪ್ಪ, ನಿಜವಾಗಿಯೂ ನಾನೇ ನಿನ್ನ ಮಗ. ಎಲ್ಲಿ, ನಾನೊಂದಿಷ್ಟು ಉಳುತ್ತೇನೆ" ಎಂದ.

ರೈತ "ಬೇಡ! ಬೇಡ! ನಿನ್ನ ಪಾಡಿಗೆ ನೀನು ಹೋಗು! ದಯವಿಟ್ಟು ನನ್ನ ತಂಟೆಗೆ ಬರಬೇಡ!" ಎಂದು ದೈನ್ಯದಿಂದ ನುಡಿದ.

ಪುಟ್ಟ "ನನಗೂ ನಿನ್ನಷ್ಟೇ ಚೆನ್ನಾಗಿ ಉಳುವುದಕ್ಕೆ ಬರುತ್ತದಪ್ಪ!" ಎಂದ.

ರೈತನಿಗೆ ಈ ಎತ್ತರದ ಮನುಷ್ಯನನ್ನು ನೋಡಿದಂತೆಲ್ಲಾ ಹೆದರಿಕೆ ಹೆಚ್ಚಾಗತೊಡಗಿತು. ಆದುದರಿಂದ ಅವನು ಹೆಚ್ಚು ಮಾತಾಡದೆ ನೇಗಿಲನ್ನು ನಿಲ್ಲಿಸಿಬಿಟ್ಟು, ಅದರ ಪಕ್ಕದಲ್ಲಿದ್ದ ಮಣ್ಣಿನ ಮೇಲೆ ಕುಕ್ಕರಿಸಿದ.

ಪುಟ್ಟ ತಾನು ನೇಗಿಲಿಗೆ ಕೈಹಾಕಿದ. ಅವನು ಅದನ್ನು ಒಂದೇ ಕೈಯಿಂದ ಹಿಡಿದುಕೊಂಡು ಬಹಳ ಮೆಲ್ಲನೆ ಅದುಮಿದರೂ ಕೂಡ ಅದು ನೆಲದಲ್ಲಿ ಆಳವಾಗಿ ಇಳಿಯಿತು. ಅದನ್ನು ಒಂದೆರಡು ಅಡಿ ಮುಂದಕ್ಕೆ ಎಳೆಯುವ ಹೊತ್ತಿಗೆ ಎತ್ತುಗಳೆರಡಕ್ಕೂ ಉಸಿರು ಕಟ್ಟಿಕೊಂಡಿತು.

ರೈತ "ನೀನು ಉಳುವುದೇ ನಿಜವಾದರೆ, ದಯವಿಟ್ಟು ನೇಗಿಲಿನ ಕುಳವನ್ನು ಅಷ್ಟು ಆಳಕ್ಕೆ ಅದುಮಬೇಡ. ಹಾಗೆ ಮಾಡಿದರೆ, ನಿನ್ನಿಂದ ನನಗೆ ಸಹಾಯವಾಗುವುದರ ಬದಲು ನಷ್ಟವೇ ಹೆಚ್ಚಾಗುತ್ತದೆ. ಪಾಪ, ಎತ್ತುಗಳ ಗತಿ ಏನಾದೀತು ಎಂದಾದರೂ ಯೋಚಿಸಬೇಡವೆ?" ಎಂದು ಧೈರ್ಯ ಮಾಡಿ ಗೊಣಗಿದ.

ಪುಟ್ಟ ಕೂಡಲೆ ಎತ್ತುಗಳೆರಡನ್ನೂ ನೇಗಿಲಿನಿಂದ ಬಿಡಿಸಿ, "ಅಪ್ಪ, ನೀನು ಮನೆಗೆ ಹೋಗಿ, ನಾನು ಬರುವ ವೇಳೆಗೆ ಒಳ್ಳೆ ಅಡಿಗೆ ಮಾಡಿ ಇಟ್ಟಿರಬೇಕೆಂದು ಅಮ್ಮನಿಗೆ ಹೇಳು. ಅಷ್ಟುಹೊತ್ತಿಗೆ ನಾನು ಹೊಲದ ಸುತ್ತಲೂ ಒಂದು ಸಾರಿ ಕಾಲಾಡಿಸುತ್ತೇನೆ" ಎಂದ.

ರೈತ "ಸದ್ಯ, ಇವನ ಕೈಯಿಂದ ತಪ್ಪಿಸಿಕೊಳ್ಳುವ ಅವಕಾಶ ಸಿಕ್ಕಿತಲ್ಲ!" ಎಂದುಕೊಂಡು ಮನೆಯ ಕಡೆಗೆ ಓಡಿದ.

ಅನಂತರ ಪುಟ್ಟ ಎತ್ತುಗಳೇ ಇಲ್ಲದೆ ಕೈಯಿಂದಲೇ ನೇಗಿಲನ್ನು ಹೊಲದಲ್ಲಿ ಒಂದು ಬದುವಿನಿಂದ ಇನ್ನೊಂದು ಬದುವಿನವರೆಗೂ ನೂಕಿ, ಕೇವಲ ಒಂದೆರಡು ಗಂಟೆಗಳಲ್ಲೇ ಎರಡು ಮೂರು ದಿನಗಳ ಕೆಲಸವನ್ನು

ಮಾಡಿ ಮುಗಿಸಿದ. ಉಕ್ಕೆ ಹೊಡೆದದ್ದು ಆದ ಒಡನೆಯೆ ಕುಂಟೆಯ ಸಹಾಯ ದಿಂದ ಹೆಂಟೆಗಳನ್ನೆಲ್ಲಾ ಒಡೆದು, ಮಣ್ಣನ್ನೆಲ್ಲಾ ಒಂದೇ ಸಮನಾಗಿ ಪುಡಿ ಮಾಡಿ ಹರಡಿದ. ಇಷ್ಟೂ ಆದಮೇಲೆ, ನೇಗಿಲು, ಕುಂಟೆ, ಎತ್ತುಗಳು ಎಲ್ಲವನ್ನೂ ಹುಲ್ಲಿನ ಹೊರೆಯಂತೆ ಹೆಗಲ ಮೇಲೆ ಹೊತ್ತುಕೊಂಡು ಮನೆಗೆ ನಡೆದ.

ಮನೆಯನ್ನು ಸೇರಿದ ಕೂಡಲೆ ಪುಟ್ಟ ಅಡಿಗೆಯ ಕೋಣೆಗೆ ಕಾಲಿಟ್ಟು, "ಅಮ್ಮ, ಅಡಿಗೆ ಆಗಿದೆಯೆ ?" ಎಂದ.

ಆಕೆ ಮನೆಯಲ್ಲಿದ್ದ ಅತ್ಯುತ್ತಮವಾದ ಪದಾರ್ಥಗಳನ್ನು ಉಪಯೋಗಿಸಿ ಆದಷ್ಟು ರುಚಿಯಾದ ಊಟವನ್ನು ತಯಾರಿಸಿ ಇಟ್ಟಿದ್ದಳು. ಅದನ್ನು ಎರಡು ದೊಡ್ಡ ತಟ್ಟೆಗಳಲ್ಲಿ ತಂಬಿ ಪುಟ್ಟನ ಮುಂದಿಟ್ಟಳು. ಅಷ್ಟು ಆಹಾರ ಅವಳಿಗೂ ಅವಳ ಗಂಡನಿಗೂ ಎಂಟು ದಿನಗಳಾದರೂ ಬರುತ್ತಿತ್ತು. ಇವನಾದರೋ ಎಲ್ಲವನ್ನೂ ಗಬಕ್ಕನೆ ಒಂದೇ ತುತ್ತಿಗೆ ತಿಂದುಬಿಟ್ಟು "ಇನ್ನಷ್ಟಿದೆಯೆ ?" ಎಂದ. ಅವನ ತಂದೆತಾಯಿಯರು ದಿಕ್ಕು ತೋಚದೆ ಒಬ್ಬರ ಮುಖವನ್ನೊಬ್ಬರು ನೋಡಿದರು. ಮನೆಯಲ್ಲಿ ಇನ್ನೇನೂ ಇಲ್ಲವೆಂದು ಪುಟ್ಟನಿಗೆ ಅರ್ಥವಾಯಿತು. ಅವನು "ಅಪ್ಪ, ಏನೂ ಯೋಚಿಸಬೇಡ. ನಿಮ್ಮ ಮನೆಯಲ್ಲಿ ನನಗೆ ಹೊಟ್ಟೆ ತುಂಬುವಷ್ಟು ಆಹಾರ ಸಿಕ್ಕಲಾರದು ಎಂದು ನನಗೆ ಈಗ ಹೊಳೆಯಿತು. ಆದ್ದರಿಂದ ನಾನು ಇನ್ನೆಲ್ಲಿಗಾದರೂ ಹೊರಟುಹೋಗುತ್ತೇನೆ. ನನಗೆ ಕೈಯಲ್ಲಿ ಹಿಡಿದುಕೊಳ್ಳಲು ಒಂದು ಕಬ್ಬಿಣದ ಬೆತ್ತ ಬೇಕಾಗಿದೆ. ಅದು ನಾನು ಬಗ್ಗಿಸಿ ಮುರಿಯಲಾರದಷ್ಟು ಬಲವಾಗಿರಬೇಕು. ಅಂತಹುದೊಂದು ಕೋಲನ್ನು ಎಲ್ಲಾದರೂ ತಂದುಕೊಡು ; ಹೊರಟುಬಿಡುತ್ತೇನೆ " ಎಂದ.

ರೈತನಿಗೆ ಬಹಳ ಸಂತೋಷವಾಯಿತು. ಅವನು ತಕ್ಷಣವೇ ತನ್ನ ಎತ್ತುಗಳನ್ನು ಬಂಡಿಗೆ ಹೂಡಿ ಊರಿನ ಆಚೆ ಇದ್ದ ಕಮ್ಮಾರನ ಕುಲುಮೆಗೆ ಹೋಗಿ, ಅಲ್ಲಿದ್ದ ಒಂದು ದೊಡ್ಡ ಕಬ್ಬಿಣದ ಕಂಬಿಯನ್ನು ತಂದ. ಎತ್ತುಗಳಿಗೆ ಅದನ್ನು ಎಳೆಯುವುದೇ ಕಷ್ಟವಾಗುವಷ್ಟು ಭಾರವಿತ್ತು ಅದು.

ಪುಟ್ಟ ಅದನ್ನು ಎರಡು ಕೈಗಳಿಂದಲೂ ಹಿಡಿದುಕೊಂಡು ತನ್ನ ಮೊಣ ಕಾಲಿನ ಮೇಲಿಟ್ಟು ಅದುಮಿದ. ಅದು ಜೋಳದ ಕಡ್ಡಿಯ ಹಾಗೆ ಲಟಲಟನೆ ಮುರಿಯಿತು. ಅವನು "ನೋಡಿದೆಯೇನಪ್ಪ, ನನ್ನ ಶಕ್ತಿಗೆ ಸರಿಯಾದ

ಕೋಲನ್ನು ತಂದುಕೊಡಲು ನಿನ್ನಿಂದ ಸಾಧ್ಯವಿಲ್ಲ. ಆದ್ದರಿಂದ ನಾನು ಇನ್ನೆಲ್ಲಾದರೂ ಹೋಗಿ ನನ್ನ ಅದೃಷ್ಟ ಹೇಗಿದೆಯೋ ಪರಿಕ್ಷಿಸುತ್ತೇನೆ" ಎಂದು, ಹೊರಟೇಬಿಟ್ಟ.

ತಂದೆಯ ಮನೆಯಿಂದ ಹೊರಬಿದ್ದ ಪುಟ್ಟ ತಾನೊಬ್ಬ ಕಮ್ಮಾರನೆಂದು ಹೇಳಿಕೊಂಡು ತಿರುಗಾಡುತ್ತ ಒಂದು ಊರಿಗೆ ಬಂದ. ಅಲ್ಲೊಂದು ಕಬ್ಬಿಣದ ಸಾಮಾನುಗಳನ್ನು ತಯಾರಿಸುವ ಕಾರ್ಖಾನೆಯಿತ್ತು. ಆ ಕಾರ್ಖಾನೆಯ ಯಜಮಾನ ಜಿಪುಣರಲ್ಲಿ ಜಿಪುಣ. ಬೇಕಾದಷ್ಟು ಸಂಪಾದನೆಯಿದ್ದರೂ ಅವನು ಒಬ್ಬರಿಗೆ ಒಂದು ಕಾಸು ಕೊಡುವವನಲ್ಲ. ಪುಟ್ಟ ಅವನ ಹತ್ತಿರ ಹೋಗಿ, "ಏನಾದರೂ ಕೆಲಸ ಇದೆಯೆ?" ಎಂದು ಕೇಳಿದ.

ಕಾರ್ಖಾನೆಯ ಯಜಮಾನ ಅವನನ್ನು ತಲೆಯಿಂದ ಪಾದದವರೆಗೂ ಮತ್ತೆ ಮತ್ತೆ ದಿಟ್ಟಿಸಿ ನೋಡಿ, ಇಂತಹ ಆಳನ್ನು ಕೆಲಸಕ್ಕೆ ನೇಮಿಸಿಕೊಂಡರೆ ತನಗೆ ಬಹಳ ಉಳಿತಾಯವಾಗುವುದೆಂದು ಲೆಕ್ಕ ಹಾಕಿದ. "ಇವನಾದರೆ ಬೆಳಗಿನಿಂದ ಸಂಜೆಯವರೆಗೂ ಒಂದೇ ನಮೂನಾಗಿ ದುಡಿಯುತ್ತಾನೆ. ಇವನಿಗೆ ಕೊಡುವ ದುಡ್ಡು ದಂಡವಾಗುವುದಿಲ್ಲ" ಎಂದುಕೊಂಡು, ಅವನು "ಕೂಲಿ ಎಷ್ಟು ಕೊಡಬೇಕು" ಎಂದು ಪುಟ್ಟನನ್ನು ಪ್ರಶ್ನಿಸಿದ.

ಪುಟ್ಟ "ನನಗೆ ಹಣವೇನೂ ಬೇಡ. ವಾರಕ್ಕೊಂದು ಸಾರಿ ನೀನು ಇತರ ಕೆಲಸಗಾರರಿಗೆ ಕೂಲಿಯನ್ನು ಹಂಚುವಾಗ, ನನ್ನ ಕೈಯಿಂದ ಬೆನ್ನಿನ ಮೇಲೆ ಎರಡೆರಡು ಏಟು ತಿನ್ನಬೇಕು. ಇಷ್ಟೇ ನಾನು ಕೇಳುವ ಕೂಲಿ. ಇದರಿಂದ ನನ್ನ ಮನಸ್ಸಿಗೆ ಏನೋ ಒಂದು ರೀತಿಯ ಸಂತೋಷವಾಗುತ್ತದೆ. ದುಡ್ಡು ತೆಗೆದುಕೊಂಡರೆ ಅದರಿಂದ ನನಗೆ ಯಾವ ಉಪಯೋಗವೂ ಇಲ್ಲ" ಎಂದ.

ಕಾರ್ಖಾನೆಯ ಯಜಮಾನನಿಗೆ ಇದು ಬಹು ಅನುಕೂಲವಾದ ಏರ್ಪಾಡೆಂದು ತೋರಿತು. "ವಾರಕ್ಕೆ ಎರಡು ಏಟುಗಳನ್ನು ಹೇಗಾದರೂ ತಡೆದುಕೊಳ್ಳಬಹುದು. ಅದಕ್ಕೆ ಪ್ರತಿಯಾಗಿ ಎಷ್ಟು ಹಣ ಉಳಿಯುತ್ತದೆ!" ಎಂದು ಗುಣಾಕಾರ ಮಾಡಿ ಅವನು ತೃಪ್ತಿಯಿಂದ ಉಬ್ಬಿದ. ಪುಟ್ಟನಿಗೆ ಅವನ ಕಾರ್ಖಾನೆಯಲ್ಲಿ ಕೆಲಸ ಸಿಕ್ಕಿತು ಎಂದು ಬೇರೆ ಹೇಳಬೇಕೇನು?

ಮಾರನೆಯ ದಿನ ಬೆಳಗ್ಗೆ ಬಿಸಿಲು ಬರುವ ಮೊದಲೇ ಪುಟ್ಟ ಕಾರ್ಖಾನೆಯ ಕುಲುಮೆಯಲ್ಲಿ ಕೆಲಸಕ್ಕೆ ಸಿದ್ಧನಾಗಿ ನಿಂತ. ಯಜಮಾನ

ರಟ್ಟೆಯ ಗಾತ್ರದ ಕಬ್ಬಿಣದ ಸರಳೊಂದನ್ನು ಬೆಂಕಿಯಲ್ಲಿ ಕಾಯಿಸುತ್ತಿದ್ದ. ಅದು ಕೆಂಪಗೆ ಕಾದಾಗ, ಇಬ್ಬರು ಆಳುಗಳು ಉದ್ದವಾದ ಇಕ್ಕಳಗಳಿಂದ ಅದನ್ನು ಹಿಡಿದು, ಎತ್ತಲಾರದೆ ಎತ್ತಿ, ಅಡಿಗಲ್ಲಿನ ಮೇಲಿಟ್ಟರು. ಪುಟ್ಟ ಅಲ್ಲಿದ್ದ ದೊಡ್ಡದೊಂದು ಸುತ್ತಿಗೆಯನ್ನು ತೆಗೆದುಕೊಂಡು ಅದನ್ನು ಹೊಡೆಯ ಬೇಕೆಂದು ಅಪ್ಪಣೆಯಾಯಿತು. ಅವನು ಸುತ್ತಿಗೆಯನ್ನು ಒಂದೇ ಕೈಯಲ್ಲಿ ಹಿಡಿದು ಮೇಲೆಕ್ಕೆತ್ತಿ ಅಪ್ಪಳಿಸಿದ. ಅವನು ಕೊಟ್ಟ ಪೆಟ್ಟಿನ ರಭಸಕ್ಕೆ ಆ ಕಾದ ಕಬ್ಬಿಣದ ಸರಳು ಚೂರುಚೂರಾಯಿತು. ಪಾಪ, ಅಡಿಗಲ್ಲು ಅದುರಿ ನೆಲ ದೊಳಕ್ಕೆ ಇಳಿದುಹೋಯಿತು.

ಇದನ್ನು ಕಂಡು ಕಾರ್ಖಾನೆಯ ಯಜಮಾನನ ಎದೆ ಧಸಕ್ಕೆಂದಿತು. ಅವನು ಪುಟ್ಟನನ್ನು ಕುರಿತು "ನಿನ್ನಂಥವನನ್ನು ಬಹಳ ಕಾಲ ಇಟ್ಟುಕೊಂಡರೆ ಆಯಿತು ನನ್ನ ಗತಿ! ಎರಡೇ ದಿನಗಳಲ್ಲಿ ಜೋಳಿಗೆ ಹೆಗಲಿಗೆ ಹಾಕಿಕೊಂಡು ಭಿಕ್ಷೆಗೆ ಹೊರಡಬೇಕಾಗುತ್ತದೆ! ಎಂಥ ಒರಟ ನೀನು! ನಯ, ನಾಜೂಕು ಒಂದೂ ಬೇಡವೆ? ಇನ್ನು ಸಾಕು ನನಗೆ ನಿನ್ನ ಕೆಲಸ!" ಎಂದ.

ಪುಟ್ಟನ ಮನಸ್ಸು ಸ್ವಲ್ಪವೂ ಅಳುಕಲಿಲ್ಲ. ಅವನು "ಆಗಬಹುದು. ನನಗೇನು—ಇಲ್ಲಲ್ಲದಿದ್ದರೆ ಇನ್ನೊಂದು ಕಡೆ ಯಾವುದಾದರೂ ಉದ್ಯೋಗ ಸಿಕ್ಕೇ ಸಿಕ್ಕುತ್ತದೆ. ಆದರೆ ನಾನು ಇದುವರೆಗೂ ಮಾಡಿರುವಷ್ಟು ಕೆಲಸಕ್ಕೆ ಪ್ರತಿಯಾಗಿ ನೀನು ಸಂಭಾವನೆ ಕೊಡಬೇಬೇಕು. ನೀನು ನನ್ನ ಕೈಯಿಂದ ವಾರಕ್ಕೆ ಎರಡು ಏಟು ತಿನ್ನಬೇಕು ಎಂದಲ್ಲವೆ ಒಪ್ಪಂದವಾಗಿದ್ದುದು? ನಾನು ಒಂದು ವಾರ ಪೂರ್ತಿಯಾಗಿ ಕೆಲಸ ಮಾಡಿಲ್ಲ. ಆದ್ದರಿಂದ ಒಂದೇ ಏಟು ಕೊಡುತ್ತೇನೆ. ಅನ್ಯಾಯದ ಸಂಪಾದನೆ ನನಗೇನೂ ಬೇಡ!" ಎಂದು, ಮುಷ್ಟಿಯನ್ನು ಬಿಗಿ ಮಾಡಿ ಯಜಮಾನನ ಬೆನ್ನಿನ ಮೇಲೆ ಒಂದು ಗುದ್ದು ಕೊಟ್ಟ. ಅದರ ಪೆಟ್ಟಿಗೆ ಅವನು ಜ್ಞಾನ ತಪ್ಪಿ ನೂರು ಅಡಿ ಆಚೆ ಇದ್ದ ಒಂದು ಮನೆಯ ಛಾವಣಿಯ ಮೇಲಕ್ಕೆ ಹಾರಿ ಹೋಗಿ ಬಿದ್ದು, ಅಲ್ಲಿಂದ ನೆಲಕ್ಕುರುಳಿದ. ಅವನಿಗೆ ಮತ್ತೆ ಪ್ರಜ್ಞೆ ಬರುವುದಕ್ಕೆ ಮೂರು ದಿನ ಬೇಕಾಯಿತು.

ಇತ್ತ ಪುಟ್ಟ ಕಾರ್ಖಾನೆಯ ಅಂಗಳದಲ್ಲಿ ಬಿದ್ದಿದ್ದ ಒಂದು ದೊಡ್ಡ

ಕಬ್ಬಿಣದ ತೊಲೆಯನ್ನು ಕೈಗೆ ತೆಗೆದುಕೊಂಡು, ಅದನ್ನು ಬೆತ್ತದ ಹಾಗೆ ಹಿಂದಕ್ಕೂ ಮುಂದಕ್ಕೂ ಬೀಸುತ್ತ ದಾರಿ ಹಿಡಿದ.

ಒಂದೆರಡು ದಿನ ಎಲ್ಲೆಲ್ಲೋ ಅಲೆದಾಡಿ, ಪುಟ್ಟ ಕೊನೆಗೆ ಮಲೆನಾಡಿನ ಒಂದು ದೊಡ್ಡ ಹಳ್ಳಿಗೆ ಬಂದ. ಆ ಹಳ್ಳಿಯ ಗೌಡ ಸುತ್ತಮುತ್ತಲ ಪ್ರದೇಶ ವಲ್ಲೆಲ್ಲಾ ಅತಿ ದೊಡ್ಡ ಸಾಹುಕಾರನೆಂದು ಹೆಸರು ಪಡೆದಿದ್ದ. ಅವನ ಮನೆ ಯಲ್ಲಿ ಐವತ್ತು ಅರವತ್ತು ಜನ ಆಳುಗಳು ಚಾಕರಿ ಮಾಡಿಕೊಂಡಿದ್ದರು. ಪುಟ್ಟ ಅವನನ್ನು ಕಂಡು "ಏನಾದರೂ ಕೆಲಸ ಸಿಕ್ಕುತ್ತದೆಯೆ?" ಎಂದು ಕೇಳಿದ.

ಸಾಹುಕಾರ ಪುಟ್ಟನನ್ನು ತಲೆಯಿಂದ ಕಾಲಿನವರೆಗೂ ಅನೇಕ ಸಾರಿ ದಿಟ್ಟಿಸಿ ನೋಡಿ, "ಇಂಥ ಆಳು ಒಬ್ಬನಿರುವುದೂ ಒಂದೇ, ಇತರ ಜನ ನೂರು ಮಂದಿ ಇರುವುದೂ ಒಂದೇ" ಎಂದು ಯೋಚಿಸಿ ಅವನನ್ನು ಕೂಡಲೆ ತನ್ನ ಸೇವಕರಲ್ಲಿ ಒಬ್ಬನಾಗಿ ನೇಮಿಸಿಕೊಂಡ. ಆದರೆ, ಪುಟ್ಟ ತನ್ನ ಸಂಬಳವನ್ನು ಹಣದ ರೂಪದಲ್ಲಿ ತೆಗೆದುಕೊಳ್ಳುವುದಕ್ಕೆ ಮಾತ್ರ ಒಪ್ಪಲಿಲ್ಲ. ಹಿಂದೆ ಕಬ್ಬಿಣದ ಕಾರ್ಖಾನೆಯ ಯಜಮಾನನೊಡನೆ ಮಾಡಿಕೊಂಡಿದ್ದಂತೆಯೇ ಇಲ್ಲೂ ಅವನು ಒಂದು ಒಪ್ಪಂದ ಮಾಡಿಕೊಂಡ. ತಿಂಗಳಿಗೊಂದು ಸಾರಿ ಗೌಡ ತನ್ನ ಇತರ ಆಳುಗಳಿಗೆ ಸಂಬಳ ಕೊಡುವ ಸಮಯದಲ್ಲಿ ಪುಟ್ಟನ ಕೈಯಿಂದ ಎರಡು ಏಟು ತಿನ್ನಬೇಕೆಂದೂ, ಅಷ್ಟು ಹೊರತು ದುಡ್ಡು ಏನನ್ನೂ ಕೊಡಬೇಕಾದುದಿಲ್ಲ ವೆಂದೂ ಇಬ್ಬರಿಗೂ ಮಾತಾಯಿತು.

ಮರುದಿನ ಬೆಳಕು ಹರೆದು ಹೊತ್ತು ಮೂಡಿ ಬಿಸಿಲು ಬೆಳೆದರೂ ಪುಟ್ಟ ತನ್ನ ಹಾಸಿಗೆಯಲ್ಲಿ ಇನ್ನೂ ಗೊರಕೆ ಹೊಡೆಯುತ್ತ ಕುಂಭಕರ್ಣನ ಹಾಗೆ ಮಲಗಿದ್ದ. ಆಗ ಅವನ ಸಹೋದ್ಯೋಗಿಗಳಾದ ಇಬ್ಬರು ಸೇವಕರು ಅಲ್ಲಿಗೆ ಬಂದು ಅವನನ್ನು ಬಲವಾಗಿ ಅಲುಗಾಡಿಸಿ ಎಬ್ಬಿಸಿ, "ಇದೇನು ನಿಮ್ಮ ಅಪ್ಪನ ಮನೆ ಎಂದು ತಿಳಿದುಕೊಂಡಿದ್ದೀಯೇನಯ್ಯ? ಏಳು—ನಾವು ಮೂವರೂ ಕಾಡಿಗೆ ಹೋಗಿ ಸಂಜೆಯಾಗುವುದರೊಳಗೆ ಒಬ್ಬೊಬ್ಬರು ಒಂದೊಂದು ದೊಡ್ಡ ಗಾಡಿ ಸೌದೆ ತರಬೇಕೆಂದು ಗೌಡರ ಅಪ್ಪಣೆಯಾಗಿದೆ" ಎಂದರು.

ಪುಟ್ಟ "ಅದೇನು ಮಹಾ ಕೆಲಸ? ನೀವಿಬ್ಬರೂ ಮೊದಲು ಹೋಗಿ ಸೌದೆ ಕಡಿಯುತ್ತಿರಿ. ನಾನು ಇನ್ನೊಂದು ನಿದ್ದೆಮಾಡಿ ಬಂದುಬಿಡುತ್ತೇನೆ.

ನನಗೆ ಸುಮ್ಮನೆ ತೊಂದರೆ ಕೊಡಬೇಡಿ" ಎಂದು ಅಸಮಾಧಾನದಿಂದ ಗೊಣಗಿದ.

ಅವರು ಇನ್ನು ಇವನ ತಂಟೆಗೆ ಹೋದರೆ ಏನು ಮಾಡಿಬಿಡುವನೋ ಎಂದು ಹೆದರಿ ತಮ್ಮ ಪಾಡಿಗೆ ತಾವು ತಂಗಳೂಟ ತಿಂದು ಗಾಡಿಗಳನ್ನು ಹೊಡೆದುಕೊಂಡು ಕಾಡಿಗೆ ತೆರಳಿದರು.

ಪುಟ್ಟ ಇನ್ನೆರಡು ಗಂಟೆ ನಿರಾತಂಕವಾಗಿ ನಿದ್ದೆಹೋದ. ಅನಂತರ ಎದ್ದು ಕೈಕಾಲು ಮುಖ ತೊಳೆದುಕೊಂಡು ರುಚಿರುಚಿಯಾಗಿ ಅಡಿಗೆ ಮಾಡಿಕೊಂಡು ಬಿಸಿಬಿಸಿಯಾಗಿ ಉಂಡು, ಮತ್ತೆ ಮಲಗಿದ. ಅವನನ್ನು ಮಾತಾಡಿಸುವುದಕ್ಕೇ ಇತರರಿಗೆ ಭಯ.

ಕಡೆಗೆ ಸಂಜೆ ನಾಲ್ಕು ಗಂಟೆಯ ಹೊತ್ತಿಗೆ ಅವನು ನಿಧಾನವಾಗಿ ಎದ್ದು ಗಾಡಿಗೆ ಎತ್ತುಗಳನ್ನು ಹೂಡಿಕೊಂಡು ಕಾಡಿನ ಕಡೆಗೆ ಹೊರಟ.

ದಾರಿಯಲ್ಲಿ ಒಂದು ಇಕ್ಕಟ್ಟಾದ ಕಣಿವೆಯಿತ್ತು. ಅದರ ಎರಡು ಬದಿಗಳಲ್ಲೂ ದೊಡ್ಡ ದೊಡ್ಡ ಬಂಡೆಗಳಿದ್ದವು. ಮಧ್ಯೆ ಒಂದು ಸಾರಿಗೆ ಒಂದೊಂದು ಬಂಡಿ ಮಾತ್ರ ಹೋಗಲು ಸಾಕಾಗುವಷ್ಟು ಸ್ಥಳವಿತ್ತು.

ಪುಟ್ಟ ಮೊದಲು ಆ ಕಿರುದಾರಿಯಲ್ಲಿ ತನ್ನ ಗಾಡಿಯನ್ನು ಹೊಡೆದು ಕಣಿವೆಯನ್ನು ದಾಟಿದ. ಅನಂತರ ತಾನು ಗಾಡಿಯಿಂದ ಇಳಿದು ಕೆಲವು ಹೆಜ್ಜೆ ಹಿಂದಕ್ಕೆ ಬಂದು, ಕಣಿವೆಯ ಒಂದು ಪಕ್ಕದಿಂದ ಇನ್ನೊಂದು ಪಕ್ಕದ ವರೆಗೂ ಕಲ್ಲುಗಳನ್ನು ಒಂದರ ಮೇಲೊಂದರಂತೆ ನಾಲಾಗಿ ಪೇರಿಸಿ ಗೋಡೆಯನ್ನು ನಿರ್ಮಿಸಿದ. ಅದನ್ನು ಭೇದಿಸಿಕೊಂಡು ನುಗ್ಗಲು ಯಾವ ಪ್ರಾಣಿಗಾಗಲಿ, ಮನುಷ್ಯನಿಗಾಗಲಿ ಸಾಧ್ಯವಾಗುತ್ತಿರಲಿಲ್ಲ.

ಅನಂತರ ಅವನು ಮತ್ತೆ ಗಾಡಿಯನ್ನು ಹತ್ತಿ ಕುಳಿತುಕೊಂಡು ಅರಣ್ಯದ ಅತ್ಯಂತ ದಟ್ಟವಾದ ಪ್ರದೇಶವನ್ನು ಸೇರಿದ. ಮರ ಕಡಿಯಲು ಅವನಿಗೆ ಕೊಡಲಿಯ ಅಗತ್ಯವೇ ಇರಲಿಲ್ಲ. ತನ್ನ ಕೈಯಿಂದಲೇ ಕೊಂಬೆಗಳನ್ನು ಬಗ್ಗಿಸಿ ಮುರಿದು ಹಾಕಿದ. ಕೇವಲ ಅರ್ಧ ಗಂಟೆಯಲ್ಲಿ ಅವನು ಗಾಡಿಗೆ ಹೂಡಿದ್ದ ಎತ್ತುಗಳು ಎಳೆಯಲಾರದಷ್ಟು ಕಟ್ಟಿಗೆಯ ತುಂಡುಗಳು ರಾಶಿ ರಾಶಿಯಾಗಿ ಬಿದ್ದವು. ಅವನು ಅವನ್ನೆಲ್ಲಾ ಹೇರಿಕೊಂಡು ಬಂದ ದಾರಿಯಲ್ಲಿ ಹಿಂದಿರುಗಿದ.

ಅವನು ಗೋಡೆಯನ್ನು ಕಟ್ಟಿದ ಸ್ಥಳಕ್ಕೆ ಬರುವ ಹೊತ್ತಿಗೆ ಗೌಡನ ಇನ್ನಿಬ್ಬರು ಆಳುಗಳು ತಮ್ಮ ಗಾಡಿಗಳೊಡನೆ ಅಲ್ಲಿಗೆ ಬಂದು ನಿಂತಿದ್ದರು. ಅವರಿಬ್ಬರೂ ಹಗಲೆಲ್ಲಾ ಕಡಿದು ತಂದಿದ್ದ ಕಟ್ಟಿಗೆ ಇವನು ಅರ್ಧ ತಾಸಿನಲ್ಲಿ ಸಂಗ್ರಹಿಸಿದ್ದುದಕ್ಕಿಂತ ಎಷ್ಟೋಪಾಲು ಕಡಿಮೆಯಾಗಿತ್ತು. ಅವರು ಬೆಳಗ್ಗೆ ಕಾಡಿಗೆ ಬಂದಾಗ ಯಾವ ಅಡಚಣೆಯೂ ಇರಲಿಲ್ಲ. ಹಿಂತಿರುಗುವಾಗ ನೋಡುತ್ತಾರೆ—ಮಾಯದಿಂದಲೋ ಎನ್ನುವಂತೆ ಎದುರಿಗೆ ಎತ್ತರವಾದ ಗೋಡೆ ಎದ್ದು ನಿಂತಿದೆ! ಇಬ್ಬರೂ ಒಟ್ಟಿಗೆ ಪ್ರಯತ್ನ ಪಟ್ಟಿದ್ದರೂ ಅದರ ಒಂದು ಕಲ್ಲನ್ನು ಕೂಡ ಅಲುಗಾಡಿಸಲು ಅವರ ಕೈಯಲ್ಲಿ ಆಗುತ್ತಿರಲಿಲ್ಲ. ಏನು ಮಾಡಬೇಕೆಂದು ದಿಕ್ಕು ತೋಚದೆ ಅವರು ಕಣ್ಣು ಕಣ್ಣು ಬಿಡುತ್ತ, ಹಿಂದು ಮುಂದು ನೋಡುತ್ತ, ಕತ್ತಲಾಗಿಬಿಟ್ಟರೆ ಏನು ಗತಿ ಎಂದು ಹೆದರುತ್ತ ತವಕದಿಂದ ತುಂಬಿ ನಿಂತಿದ್ದರು.

ಪುಟ್ಟ ಅವರನ್ನು ದೂರದಿಂದಲೇ ಗುರುತಿಸಿ, "ನೋಡಿದಿರೋ, ನಾನು ಹೇಳಿದರೆ ನೀವು ಕೇಳಲಿಲ್ಲ. ಏನೋ ಕಡಿದು ಕಟ್ಟೆ ಹಾಕುವವರ ಹಾಗೆ ಅವಸರವಸರವಾಗಿ ಓಡಿಬಂದಿರಿ. ನೀವೂ ನನ್ನ ಜೊತೆಯಲ್ಲೇ ಬಂದಿದ್ದರೆ ನನ್ನ ಹಾಗೆಯೇ ಇನ್ನೊಂದೆರಡು ಗಂಟೆ ಚೆನ್ನಾಗಿ ನಿದ್ದೆ ಮಾಡಬಹು ದಾಗಿತ್ತು" ಎಂದು ಹಂಗಿಸಿದ. ತರುವಾಯ ಅವನು ಕಟ್ಟಿಗೆ ತುಂಬಿದ್ದ ತನ್ನ ಗಾಡಿಯನ್ನು ಒಂದು ಭುಜದ ಮೇಲೂ ಎತ್ತುಗಳೆರಡನ್ನೂ ಇನ್ನೊಂದು ಭುಜದ ಮೇಲೂ ಇಟ್ಟುಕೊಂಡು ಗೋಡೆಯ ಕಡೆಗೆ ನಡೆದ. ಇವನ ಕೈ ತಾಕಿದ ಕೂಡಲೇ ಗೋಡೆಯ ಕಲ್ಲುಗಳು ಹುಡುಗರು ಆಡುವ ಗೋಲಿಗಳ ಹಾಗೆ ಉರುಳಿ ಹೋದವು. ಇನ್ನಿಬ್ಬರು ಸೇವಕರು ಮನೆಯನ್ನು ತಲಪುವ ವೇಳೆಗೆ ಪುಟ್ಟ ತಾನು ತಂದಿದ್ದ ಕಟ್ಟಿಗೆಯನ್ನೆಲ್ಲಾ ಒಂದು ಮೂಲೆಯಲ್ಲಿ ಒಪ್ಪವಾಗಿ ಒಟ್ಟಿ, ಉಂಡು ಮಲಗಿದ್ದ. ಇವನ ಬಲವನ್ನೂ ಚಾಕಚಕ್ಯತೆ ಯನ್ನೂ ಕಂಡು ಗೌಡನಿಗೆ ಬಹು ಸಂತೋಷವಾಯಿತು. ಅವನು ತನ್ನ ಹೆಂಡತಿಯನ್ನು ಕರೆದು, ಏನು ಹೆಣ್ಣೆ, ಈ ಹೊಸ ಆಳು ನಿದ್ದೆ ಹೋದಷ್ಟೂ ಕೆಲಸ ಚೆನ್ನಾಗಿ ಮಾಡುತ್ತಾನೆ. ಒಳ್ಳೆ ಅಪರಂಜಿ ಇವನು!" ಎಂದು ಹೇಳಿದ.

ಒಂದು ತಿಂಗಳಾಯಿತು. ತನ್ನ ಜೊತೆಯ ಆಳುಗಳಿಗೆಲ್ಲಾ ಸಂಬಳ ಸಲ್ಲುತ್ತಿದ್ದುದನ್ನು ನೋಡಿ ಪುಟ್ಟ ತನಗೂ ತನ್ನ ಕೆಲಸಕ್ಕೆ ಪ್ರತಿಫಲ ಬರ

ಬೇಕೆಂದು ಕೇಳಿದ. ಅವನಿಗೆ ಬರಬೇಕಾದ ಸಂಬಳವೆಂದರೆ ಗೌಡ ಅವನ ಕೈಯಿಂದ ಎರಡು ಏಟು ತಿನ್ನಬೇಕೆಂದಲ್ಲವೆ? ಈ ವಿಷಯ ಜ್ಞಾಪಕಕ್ಕೆ ಬಂದ ಕೂಡಲೇ ಗೌಡನ ಎದೆ ಡವಡವ ಬಡಿಯತೊಡಗಿತು. ಈ ಮನುಷ್ಯನ ಕೈಯಿಂದ ಏಟು ತಿಂದರೆ ತನ್ನ ಮೈ ಜಜ್ಜಿಹೋಗುವುದು ಖಂಡಿತವೆಂದು ಅವನು ಊಹಿಸಿದ. ಆದ್ದರಿಂದ ಅವನು ಪುಟ್ಟನನ್ನು ಕುರಿತು "ನನ್ನ ಹೊಲ ಮನೆ ಆಳು ಕಾಳು ಮೊದಲಾದ ಸರ್ವಸ್ವವನ್ನೂ ನಿನಗೆ ಕೊಟ್ಟುಬಿಡುತ್ತೇನೆ. ದಯವಿಟ್ಟು ನಾನು ನಿನ್ನ ಕೈಯಿಂದ ಏಟು ತಿನ್ನಬೇಕೆಂದು ಕೇಳಬೇಡ" ಎಂದ.

ಪುಟ್ಟ "ನಿನ್ನ ಆಸ್ತಿ ಕಟ್ಟಿಕೊಂಡು ನಾನೇನು ಮಾಡಿಯೇನು? ಒಪ್ಪಂದದ ಪ್ರಕಾರ ಏಟು ತಿಂದುಬಿಡು; ಹೆಚ್ಚು ಮಾತೇ ಬೇಡ" ಎಂದ.

ಇವನ ಹತ್ತಿರ ತನ್ನ ಆಟ ನಡೆಯುವುದಿಲ್ಲವೆಂದುಕೊಂಡು ಗೌಡ "ಹದಿನೈದು ದಿವಸ ಕಾಲಾವಕಾಶ ಕೊಡು. ಅಷ್ಟರಲ್ಲಿ ನನ್ನ ಮನೆಯ ವ್ಯವಹಾರವನ್ನೆಲ್ಲಾ ಸರಿಪಡಿಸಿಬಿಟ್ಟು ಸಾಯುವುದಕ್ಕೆ ಸಿದ್ಧನಾಗುತ್ತೇನೆ" ಎಂದ.

ಪುಟ್ಟ ಉದಾರ ಬುದ್ಧಿಯಿಂದ "ಆಗಲಿ" ಎಂದ.

ಗೌಡ ಪುಟ್ಟನಿಗೆ ಗೊತ್ತಿಲ್ಲದ ಹಾಗೆ ತನ್ನ ನೆರೆಹೊರೆಯವರನ್ನೆಲ್ಲಾ ಕಂಡು ಈ ಕಷ್ಟ ಪರಿಸ್ಥಿತಿಯಲ್ಲಿ ಏನು ಮಾಡಬೇಕೆಂದು ಚರ್ಚಿಸಿದ. ಎಲ್ಲರೂ ಈ ರಾಕ್ಷಸಮನುಷ್ಯನನ್ನು ಹೇಗಾದರೂ ಕೊಂದುಹಾಕುವುದೇ ಒಳ್ಳೆಯದೆಂದೂ ಅದರಿಂದ ತಮಗೆ ಮಾತ್ರವೇ ಅಲ್ಲದೆ ಪ್ರಪಂಚಕ್ಕೇ ಕ್ಷೇಮ ವೆಂದೂ ತೀರ್ಮಾನಿಸಿದರು. ಆದರೆ ಅವನನ್ನು ಕೊಲ್ಲುವುದು ಎಂದರೆ ಸುಮ್ಮನೆಯೆ? ಹದಿನಾಲ್ಕು ದಿನ ಒಂದೇ ಸಮನೆ ಯೋಚಿಸಿದ ಮೇಲೆ ಅವರು ಒಂದು ಉಪಾಯ ಹೂಡಿದರು. ಒಂದು ಬಾವಿಯ ಅಂಚಿನಲ್ಲಿ ಸುತ್ತಲೂ ದೊಡ್ಡ ದೊಡ್ಡ ಕಲ್ಲುಗಳನ್ನು ಸಿದ್ಧವಾಗಿ ಇಟ್ಟುಕೊಂಡಿರಬೇಕೆಂದೂ, ಪುಟ್ಟ ನನ್ನು ಆ ಬಾವಿಯ ನೀರನ್ನು ಚೊಕ್ಕಟ ಮಾಡಲು ಒಳಕ್ಕೆ ಇಳಿಸಬೇಕೆಂದೂ, ಅವನು ಹಾಗೆ ನೀರಿನಲ್ಲಿ ನಿಂತಿದ್ದಾಗ ಮೇಲಿನಿಂದ ಕಲ್ಲುಗಳನ್ನು ಅವನ ತಲೆಯ ಮೇಲೆ ನೂಕಬೇಕೆಂದೂ ಅವರ ಹಂಚಿಕೆ.

ಪುಟ್ಟ ಗೌಡನ ಇಚ್ಛೆಯನ್ನು ನೆರವೇರಿಸಲು ಒಪ್ಪಿಕೊಂಡು ಬಾವಿ ಗಿಳಿದ. ಅವನು ಒಳಗೆ ಹೂಳನ್ನು ತೆಗೆಯುತ್ತಿದ್ದಾಗ ಗೌಡನೂ ಅವನ ಅನುಚರರೂ ಮೇಲಿದ್ದ ಕಲ್ಲುಗಳನ್ನು ಒಂದಾಗುತ್ತಲೊಂದರಂತೆ ಬಾವಿ ಯೊಳಕ್ಕೆ ನೂಕಿದರು. ಅವು ನೀರನ್ನು ಮುಟ್ಟಿ ಮುಳುಗಿದಂತೆಲ್ಲಾ ನೀರು ಝುಲ್ಲೆಂದು ಮೇಲಕ್ಕೆ ಚಿಮ್ಮುತ್ತಿತ್ತು. ಗೌಡನೂ ಅವನ ಸ್ನೇಹಿತರೂ ತಮ್ಮ ಸಾಹಸದ ಫಲವಾಗಿ ಪುಟ್ಟನ ತಲೆ ಪುಡಿ ಪುಡಿಯಾಗಿರಬೇಕೆಂದು ಭಾವಿಸಿ ಉಬ್ಬಿದರು. ಆದರೆ ಅವನು ನಿಶ್ಚಿಂತೆಯಿಂದ ನಿಧಾನವಾಗಿ ತನ್ನ ಕೆಲಸ ಸಾಗಿಸಿದ. ಒಂದು ಸಾರಿ ಮಾತ್ರ "ಯಾರವರು ಮೇಲಿರುವವರು? ಕಾಲಿ ನಿಂದ ಬಾವಿಯ ಅಂಚಿನಲ್ಲಿರುವ ಮರಳು ಕಣಗಳನ್ನು ಹಾಗೇಕೆ ಚದರಿಸು ತ್ತಿದ್ದೀರಿ? ಅವು ಬಂದು ನನ್ನ ಕಣ್ಣಲ್ಲೆಲ್ಲಾ ತುಂಬಿಕೊಳ್ಳುತ್ತಿವೆ!" ಎಂದು ಕೂಗಿದ, ಅಷ್ಟೆ.

ಸ್ವಲ್ಪ ಹೊತ್ತಿನಲ್ಲೇ ಪುಟ್ಟ ಬಾವಿಯನ್ನೆಲ್ಲಾ ಜಾಲಾಡಿ ಅದರಲ್ಲಿದ್ದ ಕೊಳೆಯನ್ನೂ ಕೆಸರನ್ನೂ ತೆಗೆದುಹಾಕಿ ಮೇಲಕ್ಕೆ ಬಂದು ಮೈ ಕೊಡವಿಕೊಂಡು ನಿಂತ. ಗೌಡನಿಗೆ ಮತ್ತೆ ಜೀವ ಹೋದಂತೆಯೇ ಆಯಿತು. ಅವನು ತರತರ ನಡುಗುತ್ತ ಇನ್ನೊಂದು ಹದಿನೈದು ದಿನಗಳು ತಡೆಯಬೇಕೆಂದು ಪುಟ್ಟನನ್ನು ಬೇಡಿದ. ಪುಟ್ಟ "ಹೂ! ಅದೂ ಆಗಲಿ!" ಎಂದ.

ಮತ್ತೆ ಗೌಡನೂ ಊರಿನ ಇತರ ತಲೆಯಾಳುಗಳೂ ಒಂದು ಕಡೆ ಗುಟ್ಟಾಗಿ ಸಭೆ ಸೇರಿ ಯೋಚಿಸಿದರು. ಆ ಊರಿನ ಆಚೆ ಒಂದು ಹಾಳು ಕೋಟೆ ಇತ್ತು. ಅದರಲ್ಲಿ ಹಿಂದಿನ ಕಾಲದ ಬೀಸುವ ಕಲ್ಲು ಒಂದಿತ್ತು. ಮುನ್ನೂರು ನಾನೂರು ವರುಷಗಳ ಕೆಳಗೆ ಅದಕ್ಕೆ ಆನೆಗಳನ್ನು ಕಟ್ಟಿಸಿ ತಿರುಗಿಸಿ ರಾಗಿ ಬೀಸಿಸುತ್ತಿದ್ದರಂತೆ. ಈಗ ಅದು ಕೆಲಸವಿಲ್ಲದೆ ಕೋಟೆಯಲ್ಲಿ ಬಿದ್ದಿತ್ತು. ಆ ಕೋಟೆಯಲ್ಲಿ ದೆವ್ವಗಳಿವೆಯೆಂಬ ನಂಬಿಕೆ ಹಳ್ಳಿಗಾಡಿನ ಜನರಲ್ಲಿ ಪ್ರಬಲವಾಗಿತ್ತು. ಆದ್ದರಿಂದ ಅಲ್ಲಿಗೆ ಒಂಟಿಯಾಗಿ ಹೋಗುವುದಕ್ಕೆ ಎಂಥವರಾದರೂ ಹೆದರುತ್ತಿದ್ದರು. ರಾತ್ರಿಯಂತೂ ಯಾರೊಬ್ಬರೂ ಆ ಕಡೆ ಹೆಜ್ಜೆ ಹಾಕುತ್ತಿರಲಿಲ್ಲ. ಅದರಲ್ಲೂ ಅಮಾವಾಸ್ಯೆ ಹತ್ತಿರ ಬಂದಂತೆಲ್ಲಾ ಅವರ ಅಂಜಿಕೆ ಇಮ್ಮಡಿಯಾಗುತ್ತಿತ್ತು. ಈಗ ಪುಟ್ಟ ನಟ್ಟಿರುಳಿನ ಕಗ್ಗತ್ತ ಲಲ್ಲಿ ಅಲ್ಲಿಗೆ ಹೋಗಿ ನಾಲ್ಕು ಪಲ್ಲ ರಾಗಿಯನ್ನು ಆ ಬೀಸುವ ಕಲ್ಲಿನಲ್ಲಿ

ಬೀಸುವಂತೆ ಹೇಳಬೇಕೆಂದು ಅವರು ತೀರ್ಮಾನಿಸಿದರು. ಅವನು ಆ ಕಲ್ಲನ್ನು ಕೈಯಿಂದ ತಿರುಗಿಸಿ ಬೀಸಿ ಆಯಾಸಗೊಂಡು ಅರಿವು ತಪ್ಪಿ ಬೀಳುತ್ತಾನೆ; ಆಗ ಅಲ್ಲಿ ಸಂಚರಿಸುವ ದೆವ್ವಗಳು ಬಂದು ಅವನನ್ನು ಕೊಂದು ಅಥವಾ ತಿಂದು ಹಾಕುವುದು ಖಂಡಿತ ಎಂದು ಅವರ ಯೋಚನೆ.

ಪುಟ್ಟ ಈ ಸಣ್ಣ ಕೆಲಸಕ್ಕೆಲ್ಲಾ ಹೆದರುತ್ತಾನೆಯೇ? ಕೊಂಚವೂ ಅನುಮಾನಿಸದೆ ಅವನು ಆ ರಾತ್ರಿ ಒಬ್ಬನೇ ಕೋಟೆಗೆ ಹೊರಟ. ಗೌಡ ರಾಗಿಯ ಮೂಟೆಗಳನ್ನು ಬೇಕಾದರೆ ಒಂದು ಬಂಡಿಯಲ್ಲಿ ಇಟ್ಟುಕೊಂಡು ಎಳೆದುಕೊಂಡು ಹೋಗಬಹುದು ಎಂದ. ಆದರೆ ಪುಟ್ಟನಿಗೆ ಅದರ ಅಗತ್ಯವೇ ಇರಲಿಲ್ಲ. ಅವನು ಎರಡು ಮೂಟೆಗಳನ್ನು ತಲೆಯ ಮೇಲಿಟ್ಟುಕೊಂಡು, ಇನ್ನೆರಡನ್ನು ಒಂದೊಂದು ಕಂಕುಳಲ್ಲಿ ಒಂದರಂತೆ ಇರುಕಿಕೊಂಡು ನಡೆದುಕೊಂಡೇ ಹೋದ.

ಅಷ್ಟು ಕಾಳನ್ನು ಬೀಸಲು ಅವನಿಗೆ ಒಂದು ಗಂಟೆ ಕೂಡ ಹಿಡಿಯಲಿಲ್ಲ. ಅವನು ಹಿಟ್ಟನ್ನೆಲ್ಲಾ ಚೀಲಗಳಲ್ಲಿ ತುಂಬಿ ಅವುಗಳ ಬಾಯಿ ಕಟ್ಟಿ, ಹಳ್ಳಿಗೆ ಹಿಂದಿರುಗುವ ಮುಂಚೆ ತಣ್ಣಗೆ ಒಂದೆರಡು ತಾಸು ವಿಶ್ರಮಿಸಿಕೊಳ್ಳೋಣವೆಂದು ಅಲ್ಲೇ ಇದ್ದ ಒಂದು ಅಗಲವಾದ ಬಂಡೆಯ ಮೇಲೆ ಕಾಲು ಚಾಚಿ ಮಲಗಿದ. ನಿದ್ದೆ ಬಂತು.

ನಡುರಾತ್ರಿಯ ಸಮಯದಲ್ಲಿ ಇದ್ದಕ್ಕಿದ್ದ ಹಾಗೆಯೇ ಯಾರೋ ಭಯಂಕರವಾಗಿ ಕೂಗಿದಂತಾಯಿತು. ಅದಕ್ಕೆ ಪ್ರತ್ಯುತ್ತರವಾಗಿಯೋ ಎನ್ನುವಂತೆ ಇನ್ನೊಂದು ದಿಕ್ಕಿನಿಂದ ಅದಕ್ಕಿಂತಲೂ ಹೆಚ್ಚು ಭಯಂಕರವಾದ ಕೂಗು ಹೊರಟಿತು. ಒಂದೆರಡು ನಿಮಿಷಗಳಲ್ಲೇ ಕೋಟೆಯ ಆವರಣವೆಲ್ಲಾ ಬಗೆ ಬಗೆಯ ಕೂಗಾಟ ಚೀರಾಟಗಳಿಂದ ತುಂಬಿಹೋಯಿತು.

ಸಾಧಾರಣ ಜನರು ಯಾರಾದರೂ ಅಲ್ಲಿದ್ದಿದ್ದರೆ ಆ ಕೂಗುಗಳನ್ನು ಕೇಳಿ ಸತ್ತೇ ಹೋಗುತ್ತಿದ್ದರು. ಆದರೆ ಪುಟ್ಟ ಗುಂಡುಕಲ್ಲಿನ ಹಾಗೆ ನಿಶ್ಚಲನಾಗಿ ಧೈರ್ಯವಾಗಿ ಎದ್ದು ಕುಳಿತ. ಆ ಗಲಭೆಗೆ ಕಾರಣರಾರು ಎಂದು ಕಂಡುಹಿಡಿಯಬೇಕೆಂದು ಅವನಿಗೆ ಕುತೂಹಲ.

ಅವನು ಅತ್ತಿತ್ತ ಕತ್ತು ತಿರುಗಿಸಿ ನೋಡುತ್ತಿದ್ದಾಗ ಯಾರೋ ಬಂದು ಅವನ ಕೆನ್ನೆಗೆ ಫಟೀರನೆ ಏಟುಕೊಟ್ಟರು. ಪುಟ್ಟ ದಿಟ್ಟತನದಿಂದ ಎದ್ದು

ನಿಂತು, "ಓಹೋ, ಹಾಗೋ? ಇನ್ನೊಂದು ಸಾರಿ ನನ್ನ ತಂಟೆಗೆ ಬಂದರೆ ಬಡ್ಡಿಯ ಸಮೇತ ಸಾಲ ತೀರಿಸುತ್ತೇನೆ!" ಎಂದು ಗರ್ಜಿಸಿದ.

ಹಿಂದುಗಡೆಯಿಂದ ಇನ್ನಾರೋ ಬಂದು ಅವನ ತಲೆಯ ಮೇಲೆ ಬಲವಾಗಿ ಬಡಿದರು. ಅವನನ್ನು ಕೂಡ ಅದಿರಿಸುವಂತಹ ಪೆಟ್ಟು ಅದು. ಆದರೆ ಅವನು ಎದೆಜರಿಯದೆ, ತಾನೂ ಕೈಬೀಸಿ ಒಂದು ಏಟಿಗೆ ಹತ್ತು ಏಟು ಕೊಟ್ಟ. ಹೀಗೆ ದೆವ್ವಗಳಿಗೂ ಅವನಿಗೂ ರಾತ್ರಿಯೆಲ್ಲಾ ಹೋರಾಟ ಸಾಗಿತು. ಬೆಳಗಾದ ಕೂಡಲೆ ದೆವ್ವಗಳೆಲ್ಲಾ ಓಡಿಹೋದವು. ಪುಟ್ಟ ಏನೂ ನಡೆಯಲೇ ಇಲ್ಲವೇನೋ ಎನ್ನುವಂತೆ ಹುರುಪಿನಿಂದ ಹಾಡುತ್ತ ಹಿಟ್ಟಿನ ಚೀಲಗಳನ್ನು ಹೊತ್ತುಕೊಂಡು ಹಳ್ಳಿಯ ಕಡೆಗೆ ಹೆಜ್ಜೆಹಾಕಿದ.

ಇವನು ಮತ್ತೆ ಗಟ್ಟಿಮುಟ್ಟಾಗಿ ಹಿಂದಿರುಗಿದ್ದನ್ನು ನೋಡಿ ಗೌಡ ಭೂಮಿಗೆ ಇಳಿದುಹೋದ. ಇವನಿಂದ ತಪ್ಪಿಸಿಕೊಳ್ಳುವುದು ಇನ್ನು ಸಾಧ್ಯವಿಲ್ಲ ಎನ್ನಿಸಿತು ಅವನಿಗೆ. ಏನು ಗತಿ ಎಂದು ತಲೆ ಕೆರೆದುಕೊಳ್ಳುತ್ತ ಅವನು ಮನೆಯ ಮುಂದಿನ ಅಂಗಳದಲ್ಲಿ ಅತ್ತಿಂದಿತ್ತ ಓಡಾಡತೊಡಗಿದ. ಪುಟ್ಟ "ಇಗೋ ನಿನ್ನ ಹಿಟ್ಟಿನ ಮೂಟೆಗಳು!" ಎಂದು ಅವನ್ನು ಗೌಡನ ಎದುರಿಗೆ ಎಸೆದ. ಅನಂತರ "ಎಲ್ಲಿ, ಇನ್ನಾದರೂ ನನ್ನ ಸಂಬಳ ತೆಗೆದುಕೊಳ್ಳುತ್ತೇನೆ" ಎನ್ನುತ್ತ ಅವನ ತಲೆಯ ಹಿಂಭಾಗಕ್ಕೆ ಒಂದು ಏಟುಕೊಟ್ಟ. ಅದರ ಪರಿಣಾಮವಾಗಿ ಗೌಡ ಆಕಾಶಕ್ಕೆ ನೆಗೆದು, ಬೆಟ್ಟಗುಡ್ಡಗಳ ಮೇಲೆಲ್ಲಾ ಹಾರಿ ಹೋದ. ಹೋಗುವ ಮೊದಲು ಅವನು "ಅಯ್ಯೋ!" ಎಂದು ಕಿರಿಚಿಕೊಂಡ. ಅದು ಮನೆಯ ಒಳಗಿದ್ದ ಅವನ ಹೆಂಡತಿಗೆ ಕೇಳಿಸಿತು. ಗಂಡ ಏನಾದನೋ ಎಂದು ನೋಡಲು ಓಡಿಬಂದ ಅವಳಿಗೂ ಒಂದು ಏಟು ಬಿತ್ತು. ಅವಳೂ ಗೌಡನ ದಾರಿಯನ್ನೇ ಹಿಡಿದಳು. ನನಗೆ ತಿಳಿದ ಮಟ್ಟಿಗೆ ಅವರಿಬ್ಬರೂ ಇನ್ನೂ ಆಕಾಶದಲ್ಲೇ ಹಾರಾಡುತ್ತಿರಬಹುದು. ನೆಲಕ್ಕಂತೂ ಬಂದಿಲ್ಲ.

ಅವರಿಗೆ ಏನಾಯಿತು ಎಂದು ನಮಗೆ ಯೋಚನೆ. ಪುಟ್ಟನಿಗೇನು? ಅವನು ತನ್ನ ಕಬ್ಬಿಣದ ಬೆತ್ತವನ್ನು ಕೈಗೆ ತೆಗೆದುಕೊಂಡು ಅದನ್ನು ಮೇಲಕ್ಕೂ ಕೆಳಕ್ಕೂ ಬೀಸುತ್ತ ಎಲ್ಲಿಗೋ ಹೊರಟೇಬಿಟ್ಟ. ಎಲ್ಲಿಗೆ ಎಂದು ಕೇಳುವ ಧೈರ್ಯ ಯಾರಿಗಿದೆ?

# ಕರಡಪ್ಪ

ಒಂದಾನೊಂದು ಕಾಲದಲ್ಲಿ ಒಬ್ಬ ಸೈನಿಕನಿದ್ದ. ಯುದ್ಧಕ್ಕಿಳಿದನೆಂದರೆ ಅವನ ಹಾಗೆ ಹೋರಾಡುವವರು ಇಡಿ ಸೈನ್ಯದಲ್ಲಿ ಹತ್ತು ಮಂದಿ ಕೂಡ ಇರಲಿಲ್ಲ. ಬಹು ಸಾಹಸಿ ಅವನು. ಆದರೆ ಒಂದು ಸಾರಿ ಯುದ್ಧಗಳೆಲ್ಲಾ ಸಂಪೂರ್ಣವಾಗಿ ನಿಂತುಹೋಗಿ ಎಲ್ಲೆಲ್ಲೂ ಶಾಂತಿ ನೆಲೆಸಿತು. ಸಾವಿರಾರು ಜನ ಸೈನಿಕರನ್ನು ಸುಮ್ಮನೆ ಸಂಬಳ ಕೊಟ್ಟು ಇಟ್ಟುಕೊಂಡಿರುವುದು ಶುದ್ಧ ದಂಡ ಎಂದು ಆಡಳಿತಗಾರರು ತೀರ್ಮಾನಿಸಿದರು. ಆದುದರಿಂದ ಒಂದು ದಿನ ಸೇನಾಪತಿ ಮೇಲೆ ಹೇಳಿದ ಸೈನಿಕನನ್ನು ತನ್ನ ಬಳಿಗೆ ಕರೆಸಿ, "ನಮಗೆ ಇನ್ನು ನಿನ್ನ ಸೇವೆ ಸಾಕು. ಅನಾವಶ್ಯಕವಾದ ಸಿಬ್ಬಂದಿಯನ್ನೆಲ್ಲಾ ತೆಗೆದು ಹಾಕಬೇಕೆಂದು ಸರಕಾರದವರು ನಿಶ್ಚಯಿಸಿದ್ದಾರೆ. ನೀನು ಇಷ್ಟು ದಿವಸ ದಕ್ಷತೆಯಿಂದಲೂ ನಿಷ್ಠೆಯಿಂದಲೂ ಕೆಲಸಮಾಡಿದ್ದಕ್ಕಾಗಿ ಇಗೋ ಒಂದು ತಿಂಗಳ ಸಂಬಳವನ್ನು ನಿನಗೆ ಬಹುಮಾನವಾಗಿ ಕೊಟ್ಟಿದ್ದೇನೆ. ಇನ್ನು ನೀನು ಬೇರೆ ಯಾವುದಾದರೂ ಉದ್ಯೋಗವನ್ನು ನೋಡಿಕೊಳ್ಳಬಹುದು" ಎಂದ.

ಸೈನಿಕನಿಗೆ ಯೋಚನೆ ಮೊದಲಾಯಿತು. ಮುಂದೆ ಏನು ಮಾಡಬೇಕೆಂದು ಅವನಿಗೆ ತೋರಲಿಲ್ಲ. ಅವನ ತಂದೆ ತಾಯಿಗಳಿಬ್ಬರೂ ಅವನು ಚಿಕ್ಕವನಾಗಿದ್ದಾಗಲೇ ತೀರಿಹೋಗಿದ್ದುದರಿಂದ ಅವನಿಗೆ ಮನೆ ಎನ್ನುವುದಿರಲಿಲ್ಲ. ಒಬ್ಬ ಅಣ್ಣನೇನೋ ಇದ್ದ. ಆದರೆ ಅವನ ಸಂಸಾರವೇ ದೊಡ್ಡದು. ಜೊತೆಗೆ ಅವನು ಇವನಿಗೆ ಬೇರೆ ಎಲ್ಲಿಂದ ತಂದುಹಾಕಿಯಾನು ? ಎಲ್ಲಾದರೂ ಚಾಕರಿಗೆ ಸೇರಿಕೊಂಡು ಹೊಟ್ಟೆ ಹೊರೆಯಬಹುದಾಗಿತ್ತು ಎಂದರೆ ಸೈನಿಕ ಸಮರವಿದ್ಯೆಯ ಹೊರತು ಇನ್ನೇನನ್ನೂ ಕಲಿತೇ ಇರಲಿಲ್ಲ. ಹೀಗಾಗಿ ಅವನು ದಿಕ್ಕು ಕಾಣದೆ ಆ ಊರು ಈ ಊರು ಎಂದು ಅಲೆಯತೊಡಗಿದ. ದಿನಗಳು

ಕಳೆದಂತೆಲ್ಲಾ ಅವನಿಗೆ ಸರಕಾರದಿಂದ ಬಹುಮಾನವಾಗಿ ಬಂದಿದ್ದ ಹಣ ಕರಗಿತು. ಕೊನೆಗೆ ಆವನ ಜೇಬು ಪೂರ್ತಿ ಬರಿದಾಯಿತು. ಈ ಪರಿಸ್ಥಿತಿ ಯಿಂದ ಪಾರಾಗುವುದು ಹೇಗೆಂದು ಚಿಂತಿಸುತ್ತ ಅವನು ಒಮ್ಮೆ ಒಂದು ಬೆಟ್ಟದ ತಪ್ಪಲಿನಲ್ಲಿ ಕುಳಿತಿದ್ದ.

ಇದ್ದಕ್ಕಿದ್ದಂತೆಯೇ ಒಬ್ಬ ಬೇಟೆಗಾರ ಎಲ್ಲಿಂದಲೋ ಪ್ರತ್ಯಕ್ಷನಾಗಿ ಅವನ ಎದುರಿಗೆ ನಿಂತ. ಅವನನ್ನು ನೋಡಿದರೆ ಸಾಮಾನ್ಯವಾದ ಮನುಷ್ಯನ ಹಾಗೆ ಕಾಣುತ್ತಿರಲಿಲ್ಲ. ಅವನ ಮುಖದಲ್ಲಿ ಅಷ್ಟು ಕಳೆ ಉಕ್ಕುತ್ತಿತ್ತು. ವಾಸ್ತವವಾಗಿ ಅವನು ಆ ಅರಣ್ಯದ ದೇವತೆಗಳಲ್ಲಿ ಒಬ್ಬನು. ಅವನು ಸೈನಿಕ ನನ್ನು ಕುರಿತು "ನಿನ್ನ ಕಷ್ಟವೇನೆಂದು ನನಗೆ ಗೊತ್ತು. ನಿನಗೆ ಸಹಾಯ ಮಾಡೋಣವೆಂದೇ ಈ ವೇಷದಲ್ಲಿ ಇಲ್ಲಿಗೆ ಬಂದೆ. ನಿನಗೆ ಬೇಕಾದಷ್ಟು ದುಡ್ಡನ್ನು ದಯಪಾಲಿಸುತ್ತೇನೆ. ಆದರೆ ಮೊದಲು ನೀನು ಧೈರ್ಯಶಾಲಿ ಎಂಬ ಭರವಸೆ ನನಗೆ ದೊರೆಯಬೇಕು. ಹೇಡಿಯಾದವನಿಗೆ ಹಣ ಕೊಟ್ಟು ಕಳೆದುಕೊಳ್ಳಲು ನನಗೆ ಕೊಂಚವೂ ಇಷ್ಟವಿಲ್ಲ" ಎಂದ.

ಸೈನಿಕ "ಯುದ್ಧದಲ್ಲಿ ನೂರಾರು ಜನ ಪ್ರಚಂಡ ಶತ್ರುಗಳನ್ನು ಯಮ ಪುರಿಗೆ ಕಳುಹಿಸಿದ್ದೇನೆ, ನನಗೆ ಹೇಡಿತನ ಎಲ್ಲಿಂದ ಬರಬೇಕು? ಬೇಕಾದರೆ ಪರೀಕ್ಷೆ ಮಾಡು" ಎಂದ.

ಬೇಟೆಗಾರ "ಭೇಷ್! ಶೂರ ಎಂದರೆ ಹಾಗಿರಬೇಕು! ಎಲ್ಲಿ ನಿನ್ನ ಹಿಂದೆ ಏನಿದೆಯೋ ತಿರುಗಿ ನೋಡು" ಎಂದ.

ಸೈನಿಕ ಕತ್ತು ತಿರುಗಿಸಿ ನೋಡಿದ. ಒಂದು ಭಯಂಕರವಾದ ಕರಡಿ ಗುರ್ರೆನ್ನುತ್ತ ಅವನ ಕಡೆ ಬರುತ್ತಿತ್ತು.

ಅವನು "ಓಹೋ ಹಾಗೋ! ನಿನ್ನ ಮೂಗಿನಲ್ಲಿ ಏನೋ ನವೆ ಆಗು ತ್ತಿದೆ ಎಂದು ಕಾಣುತ್ತಿದೆ. ಅದಕ್ಕೇ ಹಾಗೆ ಗುರುಗುಟ್ಟುತ್ತಿರುವೆ. ತಾಳು ಅದನ್ನು ಕ್ಷಣಮಾತ್ರದಲ್ಲಿ ಹೋಗಲಾಡಿಸುತ್ತೇನೆ" ಎಂದು, ತನ್ನ ಸೊಂಟ ದಿಂದ ನೇತಾಡುತ್ತಿದ್ದ ಕತ್ತಿಯನ್ನು ಕೈಗೆ ತೆಗೆದುಕೊಂಡು ಅದರ ಸೊಳ್ಳೆಗಳಲ್ಲಿ ಚುಚ್ಚಿದ. ಅದರ ರಕ್ತ ಧಾರೆ ಧಾರೆಯಾಗಿ ಹೊರಕ್ಕೆ ಹರಿಯಿತು. ಕರಡಿ ನೆಲಕ್ಕೆ ಬಿದ್ದುದು ಮತ್ತೆ ಏಳಲಿಲ್ಲ.

ಬೇಟೆಗಾರ "ಶಹಭಾಷ್! ನೀನು ಬಹಳ ಧೈರ್ಯಶಾಲಿ ಎಂದೇನೋ ನನಗೆ ನಿಸ್ಸಂದೇಹವಾಯಿತು. ಆದರೆ ಅಷ್ಟೇ ಸಾಲದು. ನೀನು ಇನ್ನೊಂದು ಷರತ್ತಿಗೆ ಒಪ್ಪಬೇಕು" ಎಂದ.

ಸೈನಿಕ "ಯಾವ ಕೆಲಸಕ್ಕಾದರೂ ಸಿದ್ಧವಾಗಿದ್ದೇನೆ; ಹೇಳು. ಮಾಡ ಬಾರದ್ದೇನೂ ಅಲ್ಲವಲ್ಲ? ಎಂದ.

ಬೇಟೆಗಾರ "ಇನ್ನು ಏಳು ವರುಷಗಳು ನೀನು ಒಂದು ಸಾರಿ ಕೂಡ ಮೈ ತೊಳೆಯಕೂಡದು, ಕ್ಷೌರ ಮಾಡಿಸಿಕೊಳ್ಳಕೂಡದು, ತಲೆ ಬಾಚಿಕೊಳ್ಳ ಕೂಡದು, ಉಗುರು ಕತ್ತರಿಸಕೂಡದು. ನಾನು ನಿನಗೆ ಒಂದು ಅಂಗಿಯನ್ನೂ ಅದರ ಮೇಲೆ ಹಾಕಿಕೊಳ್ಳಲು ಒಂದು ಹೊದಿಕೆಯನ್ನೂ ಕೊಡುತ್ತೇನೆ. ನೀನು ಅವನ್ನು ಸದಾ ಕಾಲದಲ್ಲೂ ಧರಿಸಿರಬೇಕು. ಏಳು ವರುಷಗಳು ಮುಗಿಯುವ ವರೆಗೂ ನೀನು ಸಾಯದೆ ಬದುಕಿದ್ದರೆ ಆಮೇಲೆ ಸ್ವತಂತ್ರನೂ ಶ್ರೀಮಂತನೂ ಆಗಿ ಬಹು ದಿನಗಳು ಸುಖವಾಗಿ ಬಾಳುವೆ" ಎಂದ.

ಸೈನಿಕ ಆಗ ತಾನಿದ್ದ ಸ್ಥಿತಿಯಲ್ಲಿ ಏನು ಬೇಕಾದರೂ ಮಾಡಲು ತಯಾರಾಗಿದ್ದ. ಆದ್ದರಿಂದ ಅವನು ಬೇಟೆಗಾರ ಹೇಳಿದಂತೆಯೇ ನಡೆದು ಕೊಳ್ಳುವುದಾಗಿ ಒಪ್ಪಿಕೊಂಡ.

ಬೇಟೆಗಾರ ತಾನು ತೊಟ್ಟುಕೊಂಡಿದ್ದ ಅಂಗಿಯನ್ನೇ ಬಿಚ್ಚಿ ಸೈನಿಕನಿಗೆ ಕೊಟ್ಟು, "ನೀನು ಇದನ್ನು ಧರಿಸಿರುವಷ್ಟು ಕಾಲ ದುಡ್ಡು ಬೇಕಾದಾಗಲೆಲ್ಲಾ ಜೇಬಿನಲ್ಲಿ ಕೈ ಹಾಕು. ಹಿಡಿ ಹಿಡಿ ಹೊನ್ನು ಸಿಕ್ಕುತ್ತದೆ" ಎಂದ.

ಅನಂತರ ಅವನು ಸತ್ತು ಬಿದ್ದಿದ್ದ ಕರಡಿಯ ಶವದ ಬಳಿಗೆ ಹೋಗಿ, ಅದರ ಚರ್ಮವನ್ನು ಸುಲಿದು ತಂದು ಅದನ್ನು ಸೈನಿಕನ ಮೇಲೆ ಬೀಸಿ ಎಸೆದು, 'ಇಗೋ, ತೆಗೆದುಕೊ. ಇನ್ನು ಮೇಲೆ ಇದೇ ನಿನ್ನ ಹೊದಿಕೆಯೂ ಹಾಸಿಗೆಯೂ ಆಗಿರಬೇಕು. ಇದನ್ನು ಬಿಟ್ಟು ಬೇರೆ ಇನ್ನಾವ ಹಾಸಿಗೆಯ ಮೇಲೂ ನೀನು ಮಲಗಕೂಡದು. ನೀನು ಯಾವಾಗಲೂ ಕರಡಿಯ ಚರ್ಮವನ್ನು ಹೊದ್ದಿರುವುದರಿಂದ ಜನ ನಿನ್ನನ್ನು "ಕರಡಪ್ಪ" ಎಂದೇ ಕರೆಯಬಹುದು. ಆ ಮಾತನ್ನು ಕೇಳಿ ನೀನು ಸ್ವಲ್ಪವೂ ಅಸಹ್ಯಪಟ್ಟು ಕೊಳ್ಳಕೂಡದು" ಎಂದು ಹೇಳಿ, ನಿಂತಿದ್ದ ಹಾಗೆಯೇ ಮಾಯವಾದ.

ಸೈನಿಕ ಜೇಟಿಗಾರ ಕೊಟ್ಟಿದ್ದ ಅಂಗಿಯನ್ನು ತೊಟ್ಟುಕೊಂಡು ಅವರ ಜೇಬಿನಲ್ಲಿ ಕೈಯಿಟ್ಟ. ಜೇಟಿಗಾರನ ಮಾತು ಸುಳ್ಳಲ್ಲ ಎಂದು ಅವನಿಗೆ ರುಜುವಾತು ಸಿಕ್ಕಿತು. ಅನಂತರ ಅವನು ಕರಡಿಯ ಚರ್ಮವನ್ನು ತನ್ನ ತಲೆಯಿಂದ ಕಾಲಿನವರೆಗೂ ಹೊದ್ದುಕೊಂಡು ದಾರಿ ಹಿಡಿದು ಹೊರಟ. ಅಂದಿನಿಂದ ಅವನಿಗೆ ಯಾವ ಕೊರತೆಯೂ ಇರಲಿಲ್ಲ. ಎಷ್ಟೆಂದರಷ್ಟು ದುಡ್ಡು ಸುರಿದು ಇಷ್ಟ ಬಂದದ್ದನ್ನೆಲ್ಲಾ ಕೊಂಡು ತಂದು ಸುಖಪಡುತ್ತಿದ್ದ.

ಒಂದು ವರುಷ ಹಾಗೂ ಹೀಗೂ ಕಳೆಯಿತು. ಅದರೆ ತಿಂಗಳುಗಳು ಉರುಳಿದಂತೆಲ್ಲಾ ಅವನ ಗಡ್ಡಮೀಸೆಗಳೂ ತಲೆಗೂದಲೂ ಉಗುರುಗಳೂ ಬೆಳೆದೇ ಬೆಳೆದವು. ಅವನ ಮೈಗೆಲ್ಲಾ ಅಂಟಿಕೊಂಡಿದ್ದ ಕೊಳೆ ಬೆವರಿನಲ್ಲಿ ನೆನೆದು ನೆನೆದು ಗೊಬ್ಬರದ ಹಾಗೆ ಆಗಿತ್ತು. ನೋಡುವುದಕ್ಕೆ ಅವನು ವಿಕಾರ ವಾಗಿ ಭಯಂಕರನಾಗಿ ಕರಡಿಯ ಹಾಗೆಯೇ ಕಾಣುತ್ತಿದ್ದ. ಆದರೆ ಅವನ ಜೇಬಿನಲ್ಲಿ ಎಷ್ಟು ಖರ್ಚು ಮಾಡಿದರೂ ಮುಗಿಯದಷ್ಟು ಹಣ ಇದ್ದುದರಿಂದ ಅವನಿಗೆ ಎಲ್ಲಿ ಹೋದರೂ ಯಾವ ವಿಷಯದಲ್ಲೂ ಅಭಾವವುಂಟಾಗಲಿಲ್ಲ. ಇದಲ್ಲದೆ, ಅವನು ಗತಿಯಿಲ್ಲದವರಿಗೆ ಹೇರಳವಾಗಿ ಧನಸಹಾಯ ಮಾಡು ತ್ತಿದ್ದ. ಆದಕಾರಣ ಅವರೆಲ್ಲಾ ಅವನನ್ನು ಬಹು ಪ್ರೀತಿಯಿಂದ ಆದರಿಸಿ, ಅವನಿಗೆ ಒಳ್ಳೆಯದಾಗಲಿ ಎಂದು ಹರಸುತ್ತಿದ್ದರು.

ನಾಲ್ಕು ವರುಷಗಳು ಕಳೆದವು. ಐದನೆ ವರುಷ ಆರಂಭವಾಗಲು ಕರಡಪ್ಪ ಒಂದು ದೊಡ್ಡ ಪಟ್ಟಣಕ್ಕೆ ಬಂದ. ಆ ಊರಿನ ಪೇಟೆಯ ಬೀದಿ ಯಲ್ಲಿ ಒಂದು ವಸತಿಗೃಹವಿತ್ತು. ಊಟ ತಿಂಡಿಗಳೂ ಇಳಿದುಕೊಳ್ಳುವುದಕ್ಕೆ ಸ್ಥಳವೂ ಅಲ್ಲಿ ಒಂದೇ ಕಡೆ ದೊರೆಯುತ್ತಿದ್ದವು. ಅವನು ಆ ಮನೆಯ ಮಾಲೀಕನ ಬಳಿಗೆ ಹೋಗಿ ತನಗೊಂದು ಕೊಠಡಿ ಬೇಕು ಎಂದು ಕೇಳಿದ. ಇವನನ್ನು ನೋಡುತ್ತಿದ್ದಂತೆಯೇ ಮಾಲೀಕ ಬೆಚ್ಚಿಬಿದ್ದ. ಇವನಿಗೆ ತನ್ನ ಮನೆಯಲ್ಲಿ ಸ್ಥಳ ಕೊಟ್ಟರೆ ಆಮೇಲೆ ಇನ್ನಾರೂ ಅಲ್ಲಿಗೆ ಬರಲಾರರು ಎಂಬ ಅನುಮಾನ ಅವನನ್ನು ಪೀಡಿಸಿತು. ಅವನು ಉತ್ತರ ಹೇಳಲು ಹಿಂಜರಿಯು ತ್ತಿದ್ದುದನ್ನು ಕಂಡು ಕರಡಪ್ಪ ತನ್ನ ಜೇಬಿನಿಂದ ಒಂದು ಹಿಡಿ ನಾಣ್ಯಗಳನ್ನು ತೆಗೆದು ಅವನ ಕೈಯಲ್ಲಿಟ್ಟ. ಕೂಡಲೆ ಮಾಲೀಕನ ಮುಖದಲ್ಲಿ ಬದಲಾವಣೆ ತಲೆದೋರಿತು. ಮಾತಿಗೆ ಮೊದಲೆ ಇಷ್ಟೊಂದು ಚಿನ್ನವನ್ನು ಇಷ್ಟು ನಿರ್ಲಕ್ಷ್ಯ

ದಿಂದ ಕೊಟ್ಟುಬಿಡುವ ಈ ಗಿರಾಕಿಯನ್ನು ಏನೇ ಆಗಲಿ ಕಳೆದುಕೊಳ್ಳಕೂಡದೆಂದು ಅವನಿಗೆ ಅನ್ನಿಸಿತು. ಆದ್ದರಿಂದ ಅವನು ತನ್ನ ಕಷ್ಟವನ್ನು ಕರಡಪ್ಪನಿಗೆ ವಿವರಿಸಿ ಮನೆಯ ಆವರಣದಲ್ಲಿ ಪ್ರತ್ಯೇಕವಾಗಿದ್ದ ದನ ಕಟ್ಟುವ ಒಂದು ಕೋಣೆಯನ್ನು ಅವನಿಗೆ ಬಿಟ್ಟುಕೊಡುವುದಾಗಿ ಒಪ್ಪಿಕೊಂಡ. ಆದರೆ ದೊಡ್ಡ ಮನುಷ್ಯರು ಯಾರಾದರೂ ತನ್ನ ವಸತಿಗೃಹಕ್ಕೆ ದಯಮಾಡಿಸಿದಾಗ ಇವನು ಅವರ ಕಣ್ಣಿಗೆ ಬೀಳಕೂಡದೆಂದೂ, ಬಿದ್ದರೆ ತನ್ನ ಉದ್ಯೋಗಕ್ಕೇ ಸಂಚಕಾರ ಬರುವುದು ಖಂಡಿತವೆಂದೂ ಮತ್ತೆ ಮತ್ತೆ ಒತ್ತಿ ಹೇಳಿದ.

ಒಂದು ದಿನ ಕರಡಪ್ಪ ತನ್ನ ಕೋಣೆಯಲ್ಲಿ ಕುಳಿತು ಚಿಂತಿಸುತ್ತಿರುವಾಗ, ಹೊರಗಡೆ ಬೀದಿಯಲ್ಲಿ ಯಾರೋ ಗಟ್ಟಿಯಾಗಿ ಅಳುತ್ತಿದ್ದುದು ಅವನಿಗೆ ಕೇಳಿಸಿತು. ಅವನು ತಕ್ಷಣ ಎದ್ದು ಹೋಗಿ ಸಮಾಚಾರ ಏನೆಂದು ವಿಚಾರಿಸಿದ. ಹಾಗೆ ಅತ್ತು ಗೋಳಾಡುತ್ತಿದ್ದವನು ಒಬ್ಬ ಮುದುಕ; ಅವನು ಒಮ್ಮೆ ಬಹು ಶ್ರೀಮಂತನಾಗಿದ್ದವನು ಈಚೆಗೆ ಕಾರಣಾಂತರದಿಂದ ಕಡುಬಡವನಾಗಿ, ಸಾಲಗಾರರ ಕೈಗೆ ಸಿಕ್ಕಿಬಿದ್ದಿದ್ದ; ಅವರೆಲ್ಲರೂ ಒಟ್ಟಿಗೆ ಪಿತೂರಿ ನಡೆಸಿ ಅವನನ್ನು ನ್ಯಾಯಾಸ್ಥಾನಕ್ಕೆ ಎಳೆದೊಯ್ಯುತ್ತಿದ್ದರು, ಆದುದರಿಂದಲೇ ಅವನು ಅಷ್ಟು ರೋದಿಸುತ್ತಿದ್ದುದು ಎಂದು ತಿಳಿದು ಬಂತು.

ಕರಡಪ್ಪ ಆ ಮುದುಕನ ಹತ್ತಿರಕ್ಕೆ ಹೋಗಿ ಅವನ ಹೆಗಲ ಮೇಲೆ ಕೈಯಿಟ್ಟು "ನಿನ್ನ ಕಷ್ಟವನ್ನು ಕೊನೆಗಾಣಿಸುವ ಸಾಧನ ನನ್ನ ಜೇಬಿನಲ್ಲಿದೆ. ಇನ್ನು ಅಳುವುದನ್ನು ನಿಲ್ಲಿಸು" ಎಂದು ಸಮಾಧಾನದ ಮಾತುಗಳನ್ನಾಡಿ, ಅವನ ಅಕ್ಕಪಕ್ಕದಲ್ಲಿದ್ದ ಸಾಲಗಾರರನ್ನು ಕುರಿತು "ಈತ ಕೊಡಬೇಕಾಗಿರುವ ಸಾಲದ ಮೊತ್ತವೆಷ್ಟು, ಹೇಳಿ. ಒಂದು ಕಾಸನ್ನೂ ಬಿಡದೆ ಎಲ್ಲವನ್ನೂ ನಾನು ತೀರಿಸುತ್ತೇನೆ" ಎಂದ. ಆ ಹಣ ಇಷ್ಟೆಂದು ಅವರು ಹೇಳಿದ್ದೇ ತಡ, ಜೇಬಿನಿಂದ ಮೇಲಿಂದ ಮೇಲೆ ನಾಣ್ಯಗಳನ್ನು ತೆಗೆದು ಅವರ ಬೊಗಸೆಗಳಲ್ಲಿ ಸುರಿದು, "ಸಾಕೊ, ಇನ್ನಷ್ಟು ಬೇಕೋ?" ಎಂದ. ಅವರು ಆಶ್ಚರ್ಯದಿಂದ ಮೂಕರಾಗಿ, "ಸಾಕು, ಸಾಕು, ನಮಗೆ ಬರಬೇಕಾದುದಕ್ಕಿಂತಲೂ ಹೆಚ್ಚಾಗಿಯೇ ಬಂದಿದೆ" ಎಂದು, ಮುದುಕನನ್ನು ಬಿಟ್ಟು ಹೊರಟುಹೋದರು.

ಕರಡಪ್ಪನ ಸದ್ಗುಣವನ್ನೂ ಔದಾರ್ಯವನ್ನೂ ಕಂಡು ಆ ಮುದುಕ ಕೃತಜ್ಞತೆಯಿಂದ ಕಣ್ಣೀರು ಸುರಿಸಿದ. ಅನಂತರ ಅವನು ಕರಡಪ್ಪನಿಗೆ

ಅತಿ ವಿನಯದಿಂದ ಕೈಮುಗಿದು "ನಿನ್ನಿಂದ ಇಂದು ನಾನು ಬದುಕಿದೆ. ನಿನ್ನ ಋಣವನ್ನು ನಾನು ಹೇಗೆ ತೀರಿಸಬೇಕೊ ತಿಳಿಯದು. ನೀನು ದಯವಿಟ್ಟು ನನ್ನ ಜೊತೆಯಲ್ಲಿ ನಮ್ಮ ಮನೆಗೆ ಬರಬೇಕು. ನನಗೆ ಮೂವರು ಹೆಣ್ಣು ಮಕ್ಕಳಿದ್ದಾರೆ. ಅವರೆಲ್ಲರೂ ಬಲು ಚೆಲುವೆಯರೆಂದು ನೆರೆಹೊರೆಯಲ್ಲಿ ಹೆಸರು ಪಡೆದಿದ್ದಾರೆ. ನೀನು ಅವರಲ್ಲಿ ಯಾರನ್ನು ಬೇಕಾದರೂ ಮದುವೆಯಾಗ ಬಹುದು. ನಿನ್ನಿಂದ ನನಗೆ ಎಷ್ಟು ಉಪಕಾರವಾಗಿದೆ ಎಂದು ಅವರಿಗೆ ಗೊತ್ತಾ ದರೆ ಸಾಕು, ಅವರಾರೂ ನನ್ನ ಮಾತಿಗೆ ಅಡ್ಡಬರುವುದಿಲ್ಲವೆಂದು ನಾನು ಭರವಸೆಯಿಂದ ಹೇಳಬಲ್ಲೆ" ಎಂದ.

ಈ ಆಹ್ವಾನ ಕರಡಪ್ಪನಿಗೆ ಹಿತಕರವಾಗಿತ್ತು. ಅವನು ಮುದುಕನನ್ನು ಹಿಂಬಾಲಿಸಿ ಅವನ ಮನೆಗೆ ಹೋದ.

ಅವನನ್ನು ನೋಡಿದಕೂಡಲೆ ಮುದುಕನ ಹಿರಿಯ ಮಗಳು ಭಯಭರಿತ ಳಾಗಿ ಕಿಟಾರನೆ ಕಿರಿಚಿಕೊಂಡು ಓಡಿಹೋದಳು. ಎರಡನೆಯವಳು ಓಡಿ ಹೋಗಲಿಲ್ಲ, ನಿಜ ; ಆದರೆ ಅವನನ್ನು ತಲೆಯಿಂದ ಕಾಲಿನವರೆಗೂ ನಾಲ್ಕೈದು ಬಾರಿ ತಿರಸ್ಕಾರದಿಂದ ನೋಡಿ, "ಮನುಷ್ಯನ ಆಕಾರವೇ ಇಲ್ಲದಂತಾಗಿರುವ ಇವ ನನ್ನು ನಾನು ಮದುವೆಯಾಗುವುದು ಹೇಗೆ ಸಾಧ್ಯ ? ಮೊನ್ನೆ ದಿನ ಇಲ್ಲಿಗೆ ಬಂದು ಮನುಷ್ಯರನ್ನು ಅನುಕರಿಸಿ ಆಟಗಳನ್ನು ಆಡಿ ಹೋದ ಕರಡಿ ಇವನಿಗಿಂತಲೂ ಎಷ್ಟೋ ಲಕ್ಷಣವಾಗಿತ್ತು." ಎಂದಳು. ಆಗ ಮೂರನೆಯವಳು ಎದ್ದು ನಿಂತು, "ಅಪ್ಪ, ನಿನ್ನನ್ನು ಕಷ್ಟದಿಂದ ಬಿಡಿಸಿ ಕಾಪಾಡಿದ ಮನುಷ್ಯ ಒಳ್ಳೆಯ ವನೇ ಆಗಿರಬೇಕು. ನೀನು ನಮ್ಮಲ್ಲಿ ಒಬ್ಬಳನ್ನು ಆತನಿಗೆ ಮದುವೆಮಾಡಿ ಕೊಡುವುದಾಗಿ ಒಪ್ಪಿಕೊಂಡಿದ್ದರೆ ಏನೇ ಆಗಲಿ ಮಾತಿಗೆ ತಪ್ಪಕೂಡದು" ಎಂದಳು. ಕರಡಪ್ಪನ ಮುಖ ಮೈಗಳೆಲ್ಲಾ ಕೂದಲಿನಿಂದಲೂ ಕೊಳೆಯಿಂದಲೂ ಮುಚ್ಚಿಹೋಗಿದ್ದವು. ಇಲ್ಲದಿದ್ದರೆ ಅವಳು ಆಡಿದುದನ್ನು ಕೇಳಿದಾಗ ಅವನ ಹೃದಯ ಹೇಗೆ ಸಂತೋಷದಿಂದ ಕುಣಿಕುಣಿದು ನಕ್ಕಿತೆಂದು ನೋಡಿದವರಿಗೆ ಗೋಚರವಾಗುತ್ತಿತ್ತು. ಅವನು ತನ್ನ ಉಂಗುರವನ್ನು ಬೆರಳಿನಿಂದ ತೆಗೆದು ಅದನ್ನು ಎರಡು ತುಂಡುಗಳಾಗಿ ಮುರಿದು, ಒಂದನ್ನು ತಾನಿಟ್ಟುಕೊಂಡು ಇನ್ನೊಂದನ್ನು ಅವಳಿಗೆ ಕೊಟ್ಟ. ಅನಂತರ ತನ್ನ ಹತ್ತಿರ ಇದ್ದ ಉಂಗುರದ ತುಂಡಿನ ಮೇಲೆ ಅವಳ ಹೆಸರನ್ನೂ ಅವಳ ಹತ್ತಿರ ಇದ್ದುದರ ಮೇಲೆ ತನ್ನ

ಹೆಸರನ್ನೂ ಬರೆದ. "ಇದನ್ನು ಜೋಪಾನವಾಗಿ ನೋಡಿಕೋ. ನಾನು ಇನ್ನು ಮೂರು ವರುಷಗಳು ಹೀಗೆಯೇ ಅಲೆದಾಡುತ್ತಿರಬೇಕು. ಆಮೇಲೆ ನಾನು ಹಿಂದಿರುಗಿ ಬರದಿದ್ದರೆ, ನೀನು ಇನ್ನಾರನ್ನಾದರೂ ಮದುವೆಯಾಗಲು ಸ್ವತಂತ್ರಳಾಗುವೆ. ಆದರೆ ನನಗೆ ಯಾವ ವಿಪತ್ತೂ ಉಂಟಾಗದಿರಲಿ, ಸುಖವಾಗಿ ವಾಪಸು ಬರುವಹಾಗಾಗಲಿ ಎಂದು ದೇವರನ್ನು ಕೇಳಿಕೊ" ಎಂದು ಹೇಳಿ, ಹೆಚ್ಚು ಕಾಲ ಅಲ್ಲಿ ನಿಲ್ಲದೆ ಹೊರಟೇಹೋದ.

ಅಂದಿನಿಂದ ಆ ಹುಡುಗಿ ಅಲಂಕಾರ ಆಡಂಬರಗಳನ್ನೆಲ್ಲಾ ತೊರೆದು ಮುಂದೆ ತನ್ನ ಗಂಡನಾಗಬೇಕಾದ ಕರಡಪ್ಪನ ನೆನಪಿನಲ್ಲೇ ಮಗ್ನಳಾದಳು. ಅವಳಿಗೆ ಮೂರು ಹೊತ್ತೂ ಅವನದೇ ಯೋಚನೆ. ಯಾವಾಗ ನೋಡಿದರೂ ಒಬ್ಬಳೇ ಕುಳಿತು ಅವನನ್ನು ಜ್ಞಾಪಿಸಿಕೊಂಡು ಕಣ್ಣೀರು ಸುರಿಸುತ್ತಿರುವಳು. ಅವಳನ್ನು ಕಂಡ ಅವಳ ಅಕ್ಕಂದಿರಿಗೆ ಹಾಸ್ಯ. "ಅವನ ಕೈ ಹಿಡಿದುಕೊಳ್ಳುವಾಗ ಜೋಕೆಯಿಂದಿರು; ಇಲ್ಲದೆ ಹೋದರೆ ಅಗಲವಾದ ತನ್ನ ಅಂಗೈಗಳಿಂದ ಫಟ್ಟನೆ ಏಟು ಕೊಟ್ಟಾನು" ಎಂದು ಒಬ್ಬಳು ಹಂಗಿಸಿದರೆ, ಇನ್ನೊಬ್ಬಳು "ನೀನು ಎಚ್ಚರಿಕೆಯಿಂದಿರಬೇಕು; ಕರಡಿಗಳಿಗೆ ಸಿಹಿ ಪದಾರ್ಥಗಳೆಂದರೆ ಬಹಳ ಇಷ್ಟ; ಇವನಿಗೇನಾದರೂ ನೀನು ರುಚಿಯಾಗಿ ತೋರಿದರೆ ಅವನು ನಿನ್ನನ್ನು ತಿಂದುಹಾಕುವುದು ಖಂಡಿತ" ಎನ್ನುವಳು. ಮೊದಲನೆಯವಳು "ನೀನು ಅವನಿಗೆ ಅಸಮಾಧಾನವಾಗುವಂತಹುದು ಏನನ್ನೂ ಮಾಡಕೂಡದು, ಇಲ್ಲದಿದ್ದರೆ ಗುರುಗುಟ್ಟುತ್ತಾನೆ, ನೋಡಿಕೊ" ಎಂದರೆ, ಎರಡನೆಯವಳು "ಏನಾದರೂ ಆಗಲಮ್ಮ, ನಿಮ್ಮ ಮದುವೆ ಮಾತ್ರ ಒಳ್ಳೆ ಹುರುಪಿನಿಂದ ಕೂಡಿರುತ್ತದೆ; ಕರಡಿಗಳು ಬಹಳ ಚೆನ್ನಾಗಿ ಕುಣಿಯುತ್ತವೆಯಂತೆ" ಎನ್ನುವಳು. ಆದರೆ ಕಿರಿಯವಳು ಅವರ ಲೇವಡಿಯ ನುಡಿಗಳಿಗೆ ಗಮನವನ್ನೇ ಕೊಡದೆ ಅವರು ಎಷ್ಟು ನಕ್ಕರೂ ಸಹಿಸಿಕೊಂಡು ಸುಮ್ಮನಿರುತ್ತಿದ್ದಳು.

ಇನ್ನೂ ಮೂರು ವರುಷಗಳು ಕಳೆದವು. ಕರಡಪ್ಪನ ಅಲೆದಾಟದ ಅವಧಿ ಮುಗಿಯಿತು. ಅವನು ತಾನು ಬೇಟೆಗಾರನನ್ನು ಮೊದಲು ಕಂಡಿದ್ದ ಬೆಟ್ಟದ ತಪ್ಪಲಿಗೆ ನಡೆದ. ಅಲ್ಲಿ ಆಗಲೇ ಇವನು ಹಿಂದೆ ನೋಡಿದ್ದ ದೇವತೆ ಮತ್ತೆ ಬೇಟೆಗಾರನ ವೇಷ ಧರಿಸಿ ಇವನ ಬರವನ್ನೇ ನಿರೀಕ್ಷಿಸುತ್ತ ಒಂದು ಬಂಡೆಯ ಮೇಲೆ ಕುಳಿತಿದ್ದ. ಕರಡಪ್ಪ ಬಂದಕೂಡಲೆ ಅವನು "ನಾನು

ವಿಧಿಸಿದ ಕಠಿಣವಾದ ನಿಯಮಗಳನ್ನೆಲ್ಲಾ ನೀನು ಚಾಚು ತಪ್ಪದೆ ಪಾಲಿಸಿದೆ. ಆದ್ದರಿಂದ ನಾನು ಸುಪ್ರೀತನಾಗಿದ್ದೇನೆ. ಇನ್ನು ಮೇಲೆ ನಿನಗೆ ಯಾವ ಬಗೆಯ ಕಷ್ಟಗಳೂ ಬರದಂತೆ ಹರಸುತ್ತೇನೆ" ಎಂದು, ತನ್ನ ಬಲಗೈಯನ್ನು ಎತ್ತಿ ಕರಡಪ್ಪನ ತಲೆಯ ಮೇಲಿಟ್ಟ. ತಕ್ಷಣ ಕರಡಪ್ಪನ ದೇಹದ ಮೇಲೆ ವರುಷಗಟ್ಟಲೆ ಬೆಳೆದಿದ್ದ ಅನಾವಶ್ಯಕವಾದ ಗಡ್ಡ ಮೀಸೆಗಳೂ, ತಲೆಗೂದಲು, ಉಗುರುಗಳು, ಕೊಳೆ, ದುರ್ನಾತ ಎಲ್ಲವೂ ಮಾಯವಾದವು. ಅವನು ಮೊದಲಿದ್ದ ಹಾಗೆಯೇ ಸರ್ವಾಂಗಸುಂದರನಾದ ಯುವಕನಾದ. ಅವನನ್ನು ನೋಡಿ ನಸುನಗುತ್ತ ದೇವತೆ ಅದೃಶ್ಯನಾದ.

ಅವನು ಅತ್ತ ಕಾಣದಾದನೋ ಇಲ್ಲವೋ ಇತ್ತ ಒಂದು ಸೊಗಸಾದ ನಾಲ್ಕು ಕುದುರೆಯ ಸಾರೋಟು ಗಾಡಿ ಎಲ್ಲಿಂದಲೋ ಬಂದು ಕರಡಪ್ಪನ ಎದುರಿಗೆ ನಿಂತಿತು. ಅದರ ಸಾರಥಿ ಕೆಳಗಿಳಿದು ಕರಡಪ್ಪನಿಗೆ ತಲೆಬಾಗಿ ನಮಸ್ಕಾರ ಮಾಡಿ, "ಎಲ್ಲಿಗೆ ಹೋಗಬೇಕು ? ಅಪ್ಪಣೆಯಾಗಲಿ" ಎಂದ.

ಕರಡಪ್ಪ ಗಾಡಿಯಲ್ಲಿ ಕುಳಿತು ತನ್ನ ಪ್ರೇಮದ ಹುಡುಗಿ ಇದ್ದ ಮನೆಗೆ ತೆರಳಿದ. ಅವನನ್ನು ಗುರುತಿಸುವುದು ಈಗ ಎಂತಹ ಬುದ್ಧಿಚತುರರಿಗೂ ತೀಕ್ಷ್ಣದೃಷ್ಟಿಯುಳ್ಳವರಿಗೂ ಸಾಧ್ಯವಾಗುತ್ತಿರಲಿಲ್ಲ. ಅವನು ಯಾರೋ ಒಬ್ಬ ಶ್ರೀಮಂತನೆಂದೂ ಅಂಥವನು ತನ್ನ ಮನೆಗೆ ಬಂದುದು ತನಗೊಂದು ಹಿರಿಮೆ ಯೆಂದೂ ಬಗೆದು ಮುದುಕ ಅವನನ್ನು ವಿಶೇಷ ಗೌರವದಿಂದ ಬರಮಾಡಿ ಕೊಂಡು ಸತ್ಕರಿಸಿದ. ಊಟೋಪಚಾರಗಳು ಮುಗಿದ ನಂತರ ಕರಡಪ್ಪ ಮುದುಕನ ಕಡೆಗೆ ತಿರುಗಿ "ನಿನ್ನ ಆಕ್ಷೇಪಣೆ ಏನೂ ಇಲ್ಲದಿದ್ದರೆ ನಾನು ನಿನ್ನ ಹೆಣ್ಣುಮಕ್ಕಳಲ್ಲಿ ಒಬ್ಬಳನ್ನು ಮದುವೆಯಾಗಲು ಅಪೇಕ್ಷಿಸುತ್ತೇನೆ" ಎಂದ. ಈ ಮಾತನ್ನು ಕೇಳಿದ್ದೇ ತಡ, ದೊಡ್ಡ ಹುಡುಗಿಯರಿಬ್ಬರೂ ತಮ್ಮ ತಮ್ಮ ಕೋಣೆಗಳಿಗೆ ಓಡಿಹೋಗಿ ಹೊಸ ಹೊಸ ವಸ್ತ್ರಭೂಷಣಗಳಿಂದ ಅಲಂಕರಿಸಿ ಕೊಂಡರು. ಅವರಲ್ಲಿ ಒಬ್ಬೊಬ್ಬಳೂ ಅವನು ತನ್ನನ್ನೇ ವರಿಸುವುದು ಖಂಡಿತ ವೆಂದು ಭಾವಿಸಿ ಹೆಮ್ಮೆಯಿಂದ ಉಬ್ಬಿದಳು. ಅವರಿಬ್ಬರೂ ಹೀಗೆ ಸಂಭ್ರಮ ದಿಂದ ಸಿಂಗಾರ ಮಾಡಿಕೊಳ್ಳುತ್ತಿರುವಾಗ ಮೂರನೆಯ ಹುಡುಗಿ ಮಂಕಾಗಿ ತಲೆ ತಗ್ಗಿಸಿಕೊಂಡು ಕುಳಿತಿದ್ದಳು. ಅವಳಿಗೆ ಮೂರು ವರುಷದ ಹಿಂದೆ ತಮ್ಮ ಮನೆಗೆ ಬಂದಿದ್ದು, ತನಗೆ ಅರ್ಧ ಉಂಗುರವನ್ನು ಕೊಟ್ಟು ಮತ್ತೆ ಬರುವುದಾಗಿ

ಹೇಳಿ ಹೋಗಿದ್ದ ಕರಡಪ್ಪನದೇ ಯೋಚನೆ. ಈ ಹೊಸಬನನ್ನು ಅವಳು ಇಷ್ಟು ಹೊತ್ತೂ ಸರಿಯಾಗಿ ಕಣ್ಣೆತ್ತಿ ಕೂಡ ನೋಡಿರಲಿಲ್ಲ.

ಅವಳು ತನ್ನನ್ನು ಗುರುತಿಸಲಾರದೆ ಹೀಗೆ ಕುಳಿತಿರುವುದನ್ನು ಕಂಡು ಕರಡಪ್ಪನಿಗೆ ನಗು ಬಂತು. ಅವನು ತನ್ನ ವಶದಲ್ಲಿದ್ದ ಉಂಗುರದ ತುಂಡನ್ನು ಮೆಲ್ಲನೆ ಹೊರಕ್ಕೆ ತೆಗೆದು ಅವಳ ಮುಂದಿಟ್ಟ, ಅದು ಕಣ್ಣಿಗೆ ಬಿದ್ದೊಡನೆಯೇ ಅವಳ ಹೃದಯ ತವಕದಿಂದ ಜೋರಾಗಿ ಬಡಿಯತೊಡಗಿತು. ಅವಳು ತನ್ನ ಪಾಲಿಗೆ ಬಂದಿದ್ದ ಉಂಗುರದ ಹೋಳನ್ನು ಒಂದು ರೇಷ್ಮೆಯ ದಾರದಿಂದ ಕುತ್ತಿಗೆಗೆ ಕಟ್ಟಿಕೊಂಡಿದ್ದಳು. ಈಗ ಅದನ್ನು ಬಿಚ್ಚಿ ತೆಗೆದು ಎರಡು ತುಂಡುಗಳನ್ನೂ ಒಟ್ಟಿಗೆ ಹಿಡಿದು ನೋಡಿದಳು. ಅವು ಒಂದಕ್ಕೊಂದು ಸ್ವಲ್ಪವೂ ಹೆಚ್ಚುಕಡಿಮೆಯಿಲ್ಲದೆ ಹೊಂದಿಕೊಂಡವು. ಆಗ ಕರಡಪ್ಪ ಮಾತಾಡಿ, "ನಾನೇ ನಿನಗೆ ಗೊತ್ತಾಗಿದ್ದ ಗಂಡ. ನೀನು ಹಿಂದೆ ನನ್ನನ್ನು ನೋಡಿದಾಗ ನಾನು ಕರಡಿಯಂತೆ ಕಾಣುತ್ತಿದ್ದೆ. ದೇವರ ದಯದಿಂದ ನನಗೆ ಮತ್ತೆ ಮನುಷ್ಯರ ಸ್ವರೂಪ ಬಂದಿದೆ" ಎಂದು ಹೇಳಿ, ಅವಳ ಕೈಯನ್ನು ತನ್ನ ಕೈಯಲ್ಲಿ ತೆಗೆದುಕೊಂಡ. ಅಷ್ಟು ಹೊತ್ತಿಗೆ ಸರಿಯಾಗಿ ದೊಡ್ಡ ಹುಡುಗಿಯರಿಬ್ಬರೂ ಕಣ್ಣುಗಳನ್ನು ಕೋರೈಸುವಂತಹ ಉಡಿಗೆ ತೊಡಿಗೆಗಳನ್ನೂ ಒಡವೆಗಳನ್ನೂ ಧರಿಸಿ ಅಲ್ಲಿಗೆ ಬಂದರು. ತಮ್ಮ ಆನೆಯನ್ನು ಕರೆಳಿಸಿದ್ದ ಸುಂದರನು ವರಿಸಿದ್ದು ತಮ್ಮನ್ನಲ್ಲ, ತಮ್ಮ ತಂಗಿಯನ್ನು ಎಂದೂ, ಅವನೇ ಹಿಂದೆ ತಾವಿಬ್ಬರೂ ನೋಡಿ ನಕ್ಕು ಹೀಯಾಳಿಸಿದ್ದ ಕರಡಪ್ಪನೆಂದೂ ತಿಳಿದಾಗ ಅವರಲ್ಲಿ ಕೋಪವೂ ಅಸೂಯೆಯೂ ಒಮ್ಮೆಗೇ ಮೂಡಿದವು. ಅವನ್ನು ತಡೆಯಲಾರದೆ ಅವರು ಮನೆಯಿಂದ ಓಡಿಹೋದರು. ಒಬ್ಬಳು ಬಾವಿಗೆ ಬಿದ್ದಳು, ಇನ್ನೊಬ್ಬಳು ಒಂದು ಮರಕ್ಕೆ ತನ್ನ ಸೀರೆಯ ಸೆರಗನ್ನೇ ಬಿಗಿದು ನೇಣುಹಾಕಿಕೊಂಡಳು.

# ಹೊಗಬಾರದ ಕೋಣೆ

ಒಂದಾನೊಂದು ಕಾಲದಲ್ಲಿ ಒಬ್ಬ ಮಾಟಗಾರನಿದ್ದ. ಬಡವನ ಹಾಗೆ ವೇಷ ಹಾಕಿಕೊಂಡು ಭಿಕ್ಷೆ ಬೇಡುವುದು ಅವನ ವಾಡಿಕೆಯಾಗಿತ್ತು. ಭಿಕ್ಷೆ ಬೇಡುವ ಅಗತ್ಯ ನಿಜವಾಗಿಯೂ ಅವನಿಗೆ ಇರಲಿಲ್ಲ. ಆ ನೆಪದಲ್ಲಿ ಅವನು ಊರಿಂದೂರಿಗೆ ಹೋಗಿ ಯಾವ ಯಾವ ಮನೆಯಲ್ಲಿ ಎಂತೆಂತಹ ಚೆಲುವೆ ಯರಿದ್ದಾರೆ ಎಂಬುದನ್ನು ಕಂಡುಹಿಡಿದು ಅವರನ್ನು ಕದ್ದುಕೊಂಡು ಹೋಗು ತ್ತಿದ್ದ. ಹಾಗೆ ಹೋದವರ ಗತಿ ಏನಾಗುತ್ತಿತ್ತು ಎಂದು ಯಾರಿಗೂ ಗೊತ್ತಿರ ಲಿಲ್ಲ. ಹೋದವಳಲ್ಲಿ ಒಬ್ಬಳಾದರೂ ಹಿಂದಿರುಗಿ ಬಂದಿರಲಿಲ್ಲ.

ಒಂದು ದಿನ ಅವನು ಒಬ್ಬ ರೈತನ ಬಾಗಿಲಿಗೆ ನಡೆದು ಭಿಕ್ಷೆಬೇಡಿದ. ಆ ರೈತನಿಗೆ ಮೂವರು ಸುಂದರಿಯರಾದ ಹೆಣ್ಣುಮಕ್ಕಳಿದ್ದರು. ಅವರಲ್ಲಿ ದೊಡ್ಡವಳು ಒಂದು ಬೊಗಸೆಯ ತುಂಬ ಜೋಳದ ಕಾಳನ್ನು ಹಿಡಿದುಕೊಂಡು ಅವನಿಗೆ ನೀಡುವುದಕ್ಕೆ ಬಂದಳು. ಅವಳು ಅವನ್ನು ಅವನ ಜೋಳಿಗೆಗೆ ಹಾಕಲು ಕೈಯೆತ್ತಿದಾಗ ಅವನು ಅವಳ ಹೆಗಲನ್ನು ಮೆಲ್ಲನೆ ಮುಟ್ಟಿದ. ತಕ್ಷಣ ಅವಳು ನಿಂತಿದ್ದ ಕಡೆಯಿಂದ ಮಾಯವಾಗಿ ಅವನ ಜೋಳಿಗೆಯಲ್ಲಿ ಸೇರಿ ಕೊಂಡಳು.

ಅವನು ಅವಳನ್ನು ಯಾರಿಗೂ ಗೊತ್ತಾಗದ ರೀತಿಯಲ್ಲಿ ಎತ್ತಿಕೊಂಡು ಹೋಗಿ ದಟ್ಟವೂ ಕಗ್ಗತ್ತಲಮಯವೂ ಆದ ಒಂದು ಹೆಗ್ಗಾಡಿನ ಮಧ್ಯೆ ಇದ್ದ ತನ್ನ ಮನೆಯನ್ನು ಸೇರಿದ. ಆ ಮನೆ ಬಹು ಭವ್ಯವಾಗಿ ಸಕಲೈಶ್ವರ್ಯ ಭರಿತವಾಗಿತ್ತು. ಅಲ್ಲಿ ಅವಳು ತನಗೆ ಇಂಥ ಪದಾರ್ಥಬೇಕು ಎಂದು ಹೇಳು ವುದೇ ತಡ, ಅದು ಅವಳ ಕೈವಶವಾಗುತ್ತಿತ್ತು. ಅವನು ಅವಳ ಮೇಲೆ ತನಗೆ ಅಷ್ಟೊಂದು ಪ್ರೀತಿ ಇರುವವನ ಹಾಗೆ ನಟಿಸಿದ. ಆಗಾಗ

“ಪ್ರಾಣಪ್ರಿಯೆ, ಇಲ್ಲಿ ನಿನಗೆ ಸಮಸ್ತ ಸುಖಗಳೂ ಇವೆ, ನಿನ್ನ ಇಷ್ಟಾರ್ಥ ಏನಿದ್ದರೂ ನೆರವೇರುತ್ತದೆ, ಅಲ್ಲವೆ ?” ಎನ್ನುತ್ತಿದ್ದ.

ಹೀಗೆಯೇ ಸ್ವಲ್ಪ ಕಾಲ ಕಳೆಯಿತು. ಒಂದು ದಿವಸ ಅವನು ತಾನು ಅನಿವಾರ್ಯವಾಗಿ ಎಲ್ಲಿಗೋ ಹೋಗಬೇಕಾಗಿದ್ದಿತೆಂದೂ, ಆದುದರಿಂದ ಅವಳು ಒಪ್ಪೊತ್ತಿನ ಮಟ್ಟಿಗೆ ಒಬ್ಬಳೇ ಇರಬೇಕೆಂದೂ ಅವಳಿಗೆ ತಿಳಿಸಿ, ಹೊರಡುವ ಮೊದಲು ಅವಳನ್ನು ಕರೆದು, ಇಗೋ, ಮನೆಯ ಬೀಗದ ಕೈಗಳೆಲ್ಲಾ ಈ ಗೊಂಚಲಲ್ಲಿವೆ. ನೀನು ಎಲ್ಲಿಗೆ ಬೇಕಾದರೂ ಹೋಗಿ ಏನು ಬೇಕಾದರೂ ನೋಡಬಹುದು. ಒಂದು ಕೋಣೆಯನ್ನು ಮಾತ್ರ ನೀನು ಏನೇ ಆಗಲಿ ಪ್ರವೇಶಿಸಕೂಡದು. ಈ ಪುಟ್ಟ ಬೀಗದ ಕೈ ಆ ಕೋಣೆಯ ಬಾಗಿಲಿನದು” ಎಂದು ಬೀಗದ ಕೈಗಳ ಒಂದು ಗೊಂಚಲನ್ನೂ ಅದರ ಜೊತೆಗೆ ಒಂದು ಮೊಟ್ಟೆಯನ್ನೂ ಅವಳ ಕೈಯಲ್ಲಿಟ್ಟ. ಅವಳು ಆ ಮೊಟ್ಟೆಯನ್ನು ಬಹು ಜಾಗರೂಕತೆಯಿಂದ ನೋಡಿಕೊಳ್ಳಬೇಕೆಂದು ಬೇಡಿದ. “ನೀನು ಎಲ್ಲಿಗೆ ಹೋದರೂ ಇವನ್ನು ನಿನ್ನ ಕೈಯಲ್ಲೇ ಇಟ್ಟುಕೊಂಡಿರು. ಇದೇನಾದರೂ ಕಳೆದುಹೋದರೆ ದೊಡ್ಡ ಅನಾಹುತವೇ ಆಗಿಹೋಗುತ್ತದೆ” ಎಂದು ಹೆದರಿಸಿದ.

ಅವಳು ಅವನು ಹೇಳಿದ್ದಂತೆಯೇ ನಡೆದುಕೊಳ್ಳುವುದಾಗಿ ಮಾತು ಕೊಟ್ಟಳು.

ಅವನು ಹೊರಟುಹೋದ ಕೂಡಲೆ ಅವಳು ಮನೆಯ ಪ್ರತಿಭಾಗದಲ್ಲೂ ಸಂಚರಿಸಿ ಮೇಲಿನಿಂದ ಕೆಳಗಿನ ವರೆಗೂ ಎಲ್ಲವನ್ನೂ ಗಮನವಿಟ್ಟು ಪರೀಕ್ಷಿಸಿದಳು. ಕೋಣೆಗಳ ತುಂಬ ಚಿನ್ನಬೆಳ್ಳಿಗಳು ಕಣ್ಣು ಕುಕ್ಕುವ ಹಾಗೆ ಹೊಳೆಯುತ್ತಿದ್ದವು. ಇಂತಹ ನೋಟವನ್ನು ಅವಳು ಹಿಂದೆ ಎಂದೂ ಕಂಡಿರಲಿಲ್ಲ. ಕಡೆಗೆ ಅವಳು ಮಾಟಗಾರ ನಿಷೇಧಿಸಿದ್ದ ಕೋಣೆಯ ಸಮೀಪಕ್ಕೆ ಬಂದೇ ಬಂದಳು. ಅವನ ಅಪ್ಪಣೆಯ ಪ್ರಕಾರ ಅವಳು ಅದನ್ನು ಬಿಟ್ಟು ಮುಂದೆ ಹೋಗುವುದರಲ್ಲಿದ್ದಳು. ಅಷ್ಟರಲ್ಲಿ ಅವಳ ಕುತೂಹಲ ಮಿತಿಮೀರಿತು. ಅದರಲ್ಲಿ ಏನಿದೆಯೋ ಪತ್ತೆ ಮಾಡಲೇಬೇಕೆಂಬ ಆಸೆಯನ್ನು ಜಯಿಸಲು ಅವಳಿಗೆ ಆಗಲಿಲ್ಲ. ಮಾಟಗಾರ ತೋರಿಸಿದ್ದ ಪುಟ್ಟ ಬೀಗದ ಕೈಯನ್ನು ಇನ್ನೊಮ್ಮೆ ಚೆನ್ನಾಗಿ ನೋಡಿದಳು. ಇತರ ಬೀಗದ ಕೈಗಳಿಗೂ ಅದಕ್ಕೂ ಯಾವ ವ್ಯತ್ಯಾಸವೂ ಇರಲಿಲ್ಲ. ಹಾಗೆಯೇ ಯೋಚಿಸುತ್ತ ಅವಳು ಅದನ್ನು ಬೀಗದಲ್ಲಿಟ್ಟು

ತಿರುಗಿಸಿಯೇ ಬಿಟ್ಟಳು. ಕ್ಷಣಮಾತ್ರದಲ್ಲಿ ಬಾಗಿಲು ತೆರೆದುಕೊಂಡಿತು. ಒಳಗೆ ಕಾಲಿಡುತ್ತಿದ್ದಂತೆಯೇ ಅವಳ ಕಣ್ಣಿಗೆ ಬಿದ್ದುದೇನು? ಕೋಣೆಯ ಮಧ್ಯೆ ಒಂದು ದಪ್ಪವಾದ ಮರದ ತುಂಡನ್ನು ನಿಲ್ಲಿಸಿದ್ದರು. ಅದರ ಮೇಲೆ ಥಳಥಳಿಸುವ ಕೊಡಲಿಯೊಂದಿತ್ತು. ಸುತ್ತಲೂ ನೆಲದ ಮೇಲೆ ಹೆಪ್ಪುಗಟ್ಟಿದ್ದ ರಕ್ತವೂ ಕ್ರೂರವಾದ ರೀತಿಯಲ್ಲಿ ಕೊಲೆ ಮಾಡಲ್ಪಟ್ಟಿದ್ದವರ ದೇಹಗಳೂ ಬಿದ್ದಿದ್ದವು. ಇವನ್ನೆಲ್ಲಾ ಕಂಡು ಅವಳು ಭಯಚಕಿತಳಾಗಿ ತಾನು ಹಿಡಿದುಕೊಂಡಿದ್ದ ಮೊಟ್ಟೆಯನ್ನು ಕೈಬಿಟ್ಟಳು ಅದು ನೆಲದಮೇಲೆ ಬಿತ್ತು. ಅವಳು ಅದನ್ನು ಮತ್ತೆ ಕೈಗೆ ತೆಗೆದುಕೊಂಡಾಗ ಅದರ ಮೇಲೆ ರಕ್ತದ ಕಲೆ ಇತ್ತು. ಅವಳು ಅದನ್ನು ಅಳಿಸಿಬಿಡಲು ಎಷ್ಟು ಪ್ರಯತ್ನಿಸಿದರೂ ಪ್ರಯೋಜನವಾಗಲಿಲ್ಲ. ಅವಳು ಒರೆಸಿದಂತೆಲ್ಲಾ ಅದು ಇನ್ನಷ್ಟು ಗಟ್ಟಿಯಾಗಿ ಮೊಟ್ಟೆಗೆ ಅಂಟಿಕೊಂಡಿತು.

ಮಾಟಗಾರ ಹಿಂತಿರುಗಿ ಬಂದ ಒಡನೆಯೆ ಅವನು ಅವಳನ್ನು ಕೇಳಿದ ಮೊಟ್ಟಮೊದಲನೆಯ ಪ್ರಶ್ನೆ ಆ ಮೊಟ್ಟೆಯೂ ಬೀಗದ ಕೈಯೂ ಎಲ್ಲಿ ಎಂದು. ಅವಳು ಹೆದರಿಕೆಯಿಂದ ನಗುತ್ತಲೇ ಅವನ್ನು ಅವನ ಕೈಗೆ ಕೊಟ್ಟಳು. ಮೊಟ್ಟೆಯ ಮೇಲಿನ ರಕ್ತದ ಕಲೆ ಅವನ ಕಣ್ಣಿಗೆ ಬಿದ್ದ ಕೂಡಲೆ ಅವನು "ಓಹೋ! ನೀನು ಆ ಕೋಣೆಯೊಳಕ್ಕೆ ಹೋಗಿದ್ದೆ ಎನ್ನುವುದಕ್ಕೆ ಇಲ್ಲಿದೆ ಸಾಕ್ಷಿ! ಆಗಲಿ! ನನ್ನ ಇಷ್ಟಕ್ಕೆ ವಿರೋಧವಾಗಿ ಅಲ್ಲಿಗೆ ಹೋಗಿದ್ದೆಯಲ್ಲವೆ? ಈಗ ನಿನ್ನ ಇಷ್ಟಕ್ಕೆ ವಿರೋಧವಾಗಿ ಮತ್ತೆ ಹೋಗುವೆ. ನಿನ್ನ ಆಯಸ್ಸು ಇಂದಿಗೆ ಮುಗಿಯಿತು" ಎಂದು ಅವಳನ್ನು ನೆಲದ ಮೇಲೆ ಬೀಳುವಂತೆ ನೂಕಿದ. ಅನಂತರ ಅವನು ಅವಳನ್ನು ಕೂದಲು ಹಿಡಿದು ಎಳೆದುಕೊಂಡು ಹೋಗಿ ಆ ಕೋಣೆಯ ಮಧ್ಯೆ ಇದ್ದ ಮರದ ತುಂಡಿನ ಮೇಲೆ ಇಟ್ಟು ಅವಳ ತಲೆಯನ್ನು ದೇಹದಿಂದ ಬೇರೆಮಾಡಿದ. ಆ ಮೇಲೆ ಅವಳ ಕೈಕಾಲುಗಳನ್ನು ಕತ್ತರಿಸಿಹಾಕಿದ. ಅವಳ ರಕ್ತ ನೆಲದ ಮೇಲೆಲ್ಲಾ ಹರಿಯಿತು. ಅವನು ಅವಳ ಶವದ ವಿವಿಧ ಭಾಗಗಳನ್ನು ಅಲ್ಲೇ ಬಿಟ್ಟು ಹೊರಕ್ಕೆ ಬಂದು ಬಾಗಿಲಿಗೆ ಬೀಗ ಹಾಕಿದ.

ಮಾರನೆಯ ದಿನ ಅವನು "ಈಗ ಹೋಗಿ ಇವಳ ತಂಗಿ ಎರಡನೆಯ ಹುಡುಗಿಯನ್ನು ತರುತ್ತೇನೆ" ಎಂದು ಯೋಚಿಸಿ, ಹಿಂದಿನಂತೆಯೇ ಭಿಕ್ಷುಕನ

ವೇಷ ಧರಿಸಿ ಹೊರಟ. ಅಂದು ರೈತನ ಎರಡನೆಯ ಮಗಳು ಅವನಿಗೆ ಭಿಕ್ಷೆ ಹಾಕಲು ಬೊಗಸೆಯಲ್ಲಿ ಜೋಳವನ್ನು ಹಿಡಿದುಕೊಂಡು ಬಂದಳು ಅವನು ಅವಳನ್ನೂ ತನ್ನ ಜೋಳಿಗೆಯಲ್ಲಿ ಸೇರಿಸಿಕೊಂಡು ಕಾಡಿಗೆ ಕರೆತಂದ.

ಅಕ್ಕನ ಗತಿಯೇ ತಂಗಿಗೂ ಆಯಿತು. ಅವಳೂ ಕೂಡ ತನ್ನ ಕುತೂಹಲವನ್ನು ಹತೋಟಿಯಲ್ಲಿಟ್ಟುಕೊಳ್ಳಲಾರದೆ ಹೋಗಿ, ಅವನು ಬೇಡವೆಂದ ಕೆಲಸವನ್ನು ಮಾಡಿದಳು. ಅವಳ ಜೀವವೂ ಅವಳ ಕ್ರೌರ್ಯಕ್ಕೆ ಆಹುತಿಯಾಯಿತು.

ಅನಂತರ ಅವನು ಮೂರನೆಯ ಹುಡುಗಿಯನ್ನು ಕದ್ದು ತಂದ. ಇವಳು ತನ್ನ ಅಕ್ಕಂದಿರಿಗಿಂತಲೂ ಹೆಚ್ಚು ಬುದ್ಧಿವಂತಳೂ ಉಪಾಯಗಾರಳೂ ಆಗಿದ್ದಳು. ಆದ್ದರಿಂದ ಮಾಟಗಾರ ಬೀಗದ ಕೈಗಳನ್ನೂ ಮೊಟ್ಟೆಯನ್ನೂ ತನ್ನ ಕೈಗೆ ಕೊಟ್ಟು ಹೊರಕ್ಕೆ ಹೋದ ಕೂಡಲೆ ಅವಳು ಮಾಡಿದ ಮೊದಲನೆಯ ಕೆಲಸ ಆ ಮೊಟ್ಟೆಯನ್ನು ಒಂದು ಕಡೆ ಜೋಪಾನವಾಗಿ ಮುಚ್ಚಿಟ್ಟದ್ದು. ಆಮೇಲೆ ಅವಳು ಮನೆಯನ್ನೆಲ್ಲಾ ನೋಡಲು ಹೊರಟು, ಅವನು ಪ್ರವೇಶಿಸ ಕೂಡದೆಂದು ಹೇಳಿದ್ದ ಕೋಣೆಯನ್ನು ಹೊಕ್ಕಳು. ಅಯ್ಯೋ! ಅಲ್ಲಿ ಅವಳು ಕಂಡದ್ದು ಏನನ್ನು? ತನ್ನ ಅಕ್ಕಂದಿರಿಬ್ಬರೂ ಕೊಲೆ ಮಾಡಲ್ಪಟ್ಟು ತುಂಡು ತುಂಡಾಗಿ ಬಿದ್ದಿರುವುದನ್ನು! ಆದರೆ ಅವಳು ಅಂಜಿ ಅಳುಕದೆ, ಒಬ್ಬೊಬ್ಬಳ ರುಂಡ ಮುಂಡ ಕೈಕಾಲುಗಳನ್ನೂ ಆರಿಸಿ ತೆಗೆದು ಒಟ್ಟಿಗೆ ಕೂಡಿಸಿಟ್ಟಳು. ಅವಳು ಹೀಗೆ ಮಾಡಿದ್ದೆ ತಡ, ಅವು ಅಂಟಿಕೊಂಡು ಚಲಿಸಲಾರಂಭಿಸಿದವು. ಇಬ್ಬರು ಅಕ್ಕಂದಿರಿಗೂ ಜೀವ ಮರಳಿ ಬಂತು. ಅವರು ಕಣ್ಣು ಬಿಟ್ಟರು. ಅಕ್ಕತಂಗಿಯರೆಲ್ಲಾ ಒಬ್ಬರನ್ನೊಬ್ಬರು ತಬ್ಬಿಕೊಂಡು ಸಂತೋಷದಿಂದ ಕಣ್ಣೀರು ಸುರಿಸಿದರು.

ಮಾಟಗಾರ ವಾಪಸು ಬಂದ ಕೂಡಲೆ ಬೀಗದ ಕೈಗಳನ್ನೂ ಮೊಟ್ಟೆಯನ್ನೂ ಹಿಂದಕ್ಕೆ ಕೊಡಬೇಕೆಂದು ಕೇಳಿದ. ಈ ಸಾರಿ ಮೊಟ್ಟೆಯ ಮೇಲೆ ರಕ್ತದ ಗುರುತು ಇಲ್ಲದಿರುವುದನ್ನು ಕಂಡು, ಅವನುಅವಳನ್ನು ಕುರಿತು "ನೀನು ಪರೀಕ್ಷೆಯಲ್ಲಿ ಗೆದ್ದಿರುವೆ; ನಿನ್ನನ್ನು ನಾನು ಮದುವೆಯಾಗುತ್ತೇನೆ" ಎಂದ.

ಈಗ ಅವನಿಗೆ ಅವಳ ಮೇಲೆ ಯಾವ ಪ್ರಭಾವವೂ ಇಲ್ಲದಂತಾಯಿತು; ಅವನೇ ಅವಳು ಹೇಳಿದಂತೆ ನಡೆದುಕೊಳ್ಳಬೇಕಾದ ಗತಿ ಬಂತು.

ಆದ್ದರಿಂದ ಹುಡುಗಿ "ಆಗಬಹುದು. ಆದರೆ ಮೊದಲು ನೀನು ಒಂದು ಬುಟ್ಟಿಯ ತುಂಬ ಚಿನ್ನ ಬೆಳ್ಳಿಗಳನ್ನು ತೆಗೆದುಕೊಂಡು ಹೋಗಿ ನನ್ನ ತಂದೆ ತಾಯಿಗಳಿಗೆ ಕೊಟ್ಟು ಬರಬೇಕು. ಅಷ್ಟರಲ್ಲಿ ನಾನು ನಮ್ಮ ಮದುವೆಗೆ ಬೇಕಾಗುವ ಏರ್ಪಾಡುಗಳನ್ನೆಲ್ಲಾ ಮಾಡಿರುತ್ತೇನೆ" ಎಂದಾಗ, ಅವನು ಮರುಮಾತಾಡದೆ ಒಪ್ಪಿಕೊಂಡ.

ಅವಳು ತಾನು ಅಕ್ಕಂದಿರನ್ನು ಬಚ್ಚಿಟ್ಟಿದ್ದ ಕೋಣೆಗೆ ಓಡಿ, "ನಿಮ್ಮನ್ನು ಉಳಿಸುವ ಅವಕಾಶ ನನಗೆ ಈಗ ಒದಗಿದೆ. ಆ ದುಷ್ಟ ತಾನೇ ನಿಮ್ಮಿಬ್ಬರನ್ನೂ ನಮ್ಮ ಮನೆಗೆ ಎತ್ತಿಕೊಂಡು ಹೋಗಿ ಬಿಟ್ಟು ಬರುವ ಹಾಗೆ ಮಾಡುತ್ತೇನೆ. ನೀವು ಮಾತ್ರ ಮನೆ ಸೇರಿದ ಕೂಡಲೆ ನನ್ನ ಸಹಾಯಕ್ಕೆ ಯಾರನ್ನಾದರೂ ಇಲ್ಲಿಗೆ ಕಳುಹಿಸಲು ಮರೆಯಬಾರದು" ಎಂದಳು.

ಅವರಿಬ್ಬರನ್ನೂ ಅವಳು ಒಂದು ದೊಡ್ಡ ಬುಟ್ಟಿಯಲ್ಲಿ ಕೂಡಿಸಿ ಅವರು ಅದರಲ್ಲಿರುವರೆಂಬ ಸುಳಿವು ಕೂಡ ಗೊತ್ತಾಗದ ಹಾಗೆ ಅವರನ್ನು ಚಿನ್ನ ಬೆಳ್ಳಿಗಳಿಂದ ಮುಚ್ಚಿ ಮರೆಮಾಡಿದಳು.

ಅನಂತರ ಅವಳು ಮಾಟಗಾರನನ್ನು ಕರೆದು "ಈ ಬುಟ್ಟಿಯನ್ನು ತೆಗೆದುಕೊಂಡು ಹೋಗಿ ನನ್ನ ತಂದೆತಾಯಿಗಳಿಗೆ ಕೊಟ್ಟು ಬಾ. ದಾರಿಯಲ್ಲಿ ಎಲ್ಲಿಯೂ ಒಂದು ಹೆಜ್ಜೆ ಕೂಡ ನಿಲ್ಲದೆ ನಡೆದು ನೇರವಾಗಿ ನಮ್ಮ ಮನೆಗೇ ಹೋಗಬೇಕು. ಎಚ್ಚರಿಕೆಯಿಂದಿರು ನಾನು ನಿನ್ನನ್ನು ನನ್ನ ಕೋಣೆಯ ಪುಟ್ಟ ಕಿಟಕಿಯಲ್ಲಿ ನಿಂತು ನೋಡುತ್ತಲೇ ಇರುತ್ತೇನೆ" ಎಂದಳು

ಅವನು ಬುಟ್ಟಿಯನ್ನು ತಲೆಯ ಮೇಲಿಟ್ಟುಕೊಂಡು ಹೊರಟ. ಅದರಲ್ಲಿ ಬೆಳ್ಳಿ ಬಂಗಾರ ಮಾತ್ರವೇ ಅಲ್ಲದೆ ಇಬ್ಬರು ಹರೆಯದ ಹೆಣ್ಣುಮಕ್ಕಳೂ ಇದ್ದರೆಂದು ಅವನಿಗೇನು ಗೊತ್ತು? ಪಾಪ, ಭಾರವನ್ನು ಹೊರಲಾರದೆ ಅವನ ಮೈ ಬೆವತು ಬೆವತು ನೀರಾಗಿ ಹೋಯಿತು. ಬಳಲಿಕೆಯಿಂದ ಅವನಿಗೆ ಬಿದ್ದು ಪ್ರಾಣ ಬಿಡುವಹಾಗಾಯಿತು.

ಒಂದೆರಡು ನಿಮಿಷಗಳಾದರೂ ವಿಶ್ರಮಿಸಿಕೊಳ್ಳೋಣವೆಂದು ಅವನು ಒಮ್ಮೆ ರಸ್ತೆಯ ಪಕ್ಕದಲ್ಲಿದ್ದ ಒಂದು ಕಲ್ಲಿನ ಮೇಲೆ ಕುಳಿತುಕೊಂಡ. ಕೂಡಲೆ ಬುಟ್ಟಿಯ ಒಳಗಿನಿಂದ ಒಂದು ಧ್ವನಿ "ನಾನು ನಿನ್ನನ್ನು ನನ್ನ ಕೋಣೆಯ ಪುಟ್ಟ ಕಿಟಕಿಯಲ್ಲಿ ನಿಂತು ನೋಡುತ್ತಿದ್ದೇನೆ. ನೀನು ವಿಶ್ರಾಂತಿಗೆಂದು

ದಾರಿಯ ಬದಿಯಲ್ಲಿ ಕುಳಿತಿರುವುದು ನನಗೆ ಕಾಣುತ್ತಿದೆ. ಏಳು, ಮೊದಲು ಮೊದಲು ಮೇಲಕ್ಕೇಳು; ಹೆಜ್ಜೆ ಹಾಕು" ಎಂದು ಕೂಗಿತು.

ಅವನು ಆ ಕೂಗು ತಾನು ಮದುವೆಯಾಗಬೇಕೆಂದಿದ್ದ ಹುಡುಗಿಯದು; ಅವಳು ತನ್ನನ್ನು ಹೆದರಿಸಿದ್ದಂತೆ ಕಿಟಕಿಯಲ್ಲಿ ನಿಂತು ನೋಡುತ್ತಿರಬೇಕು ಎಂದು ಭಾವಿಸಿ, ತಕ್ಷಣ ಎದ್ದು ಮುಂದುವರಿದ. ಮತ್ತೆ ಬೆವರು ಹರಿಯಲು ಮೊದಲಾಯಿತು; ಮತ್ತೆ ಅವನ ಕಾಲುಗಳು ಕುಸಿದು ಬೀಳುವಹಾಗಾದವು. ಇನ್ನೊಮ್ಮೆ ಅವನು ಒಂದು ಕಡೆ ಕುಳಿತುಕೊಂಡ. ಮತ್ತೆ ಬುಟ್ಟಿಯ ಒಳಗಿನಿಂದ ಒಂದು ಧ್ವನಿ ಕೇಳಿಬಂತು. ಅದು ನಾನು ನಿನ್ನನ್ನು ನನ್ನ ಕೋಣೆಯ ಪುಟ್ಟ ಕಿಟಕಿಯಲ್ಲಿ ನಿಂತು ನೋಡುತ್ತಿದ್ದೇನೆ. ನೀನು ವಿಶ್ರಾಂತಿಗೆಂದು ದಾರಿಯ ಬದಿಯಲ್ಲಿ ಕುಳಿತಿರುವುದು ನನಗೆ ಕಾಣುತ್ತಿದೆ. ಏಳು, ಮೊದಲು ಮೇಲಕ್ಕೇಳು, ಹೆಜ್ಜೆ ಹಾಕು" ಎಂದಿತು. ಅವನು ನಿಂತನೆಂದರೆ ಸಾಕು, ಅದೇ ಧ್ವನಿ ಅದೇ ರೀತಿ ಕೂಗುತ್ತಿತ್ತು. ಆಪಕಾರಣ ಅವನು ರೈತನ ಮನೆಯನ್ನು ಸೇರಿ ಬುಟ್ಟಿಗಳನ್ನು ಕೊಡುವವರೆಗೂ ಏದುತ್ತಾ ಏದುತ್ತಾ ಎಡೆಬಿಡದೆ ಒಂದೇ ನಮೂನೆ ಓಡಬೇಕಾಯಿತು.

ಇತ್ತ ಮದುವಣಗಿತ್ತಿ ವಿವಾಹ ಮಹೋತ್ಸವಕ್ಕೆ ಸಿದ್ಧತೆಗಳನ್ನು ಮಾಡುತ್ತಿದ್ದಳು. ಆ ಮನೆಯಲ್ಲಿ ಕೊಲೆಯಾದವರ ತಲೆಗಳು ಎಷ್ಟೋ ಇದ್ದವು. ಅವಳು ಅವುಗಳಲ್ಲಿ ಒಂದನ್ನು ತೆಗೆದುಕೊಂಡು ಅದನ್ನು ಬಣ್ಣ ಬಣ್ಣದ ಒಟ್ಟೆ ಒರೆಗಳಿಂದಲೂ ಒಡವೆಗಳಿಂದಲೂ ಹೂಗಳಿಂದಲೂ ಸಿಂಗರಿಸಿ ಎತ್ತರವಾದ ಒಂದು ಕಿಟಕಿಯಲ್ಲಿ ಇಟ್ಟಳು. ಅನಂತರ ಮನೆಯ ಹಿಂದುಗಡೆ ರಾಶಿ ರಾಶಿಯಾಗಿ ಬಿದ್ದಿದ್ದ ಕಾಡು ಹಕ್ಕಿಗಳ ಗರಿಗಳನ್ನು ತಂದು ಅವನ್ನು ತನ್ನ ಮೈಗೆಲ್ಲಾ ಅಂಟಿಸಿಕೊಂಡಳು. ದೂರದಿಂದ ನೋಡಿದರೆ ಅವಳೂ ಒಂದು ಹಕ್ಕಿಯ ಹಾಗೆಯೇ ಕಾಣುತ್ತಿದ್ದಳು. ಅವಳು ಮನುಷ್ಯಳೆಂದು ಯಾರೂ ಸಂಶಯ ಪಡುವಹಾಗಿರಲಿಲ್ಲ. ಅಷ್ಟು ಚಮತ್ಕಾರವನ್ನು ಉಪಯೋಗಿಸಿ ಅವಳು ಗರಿಗಳಿಂದ ತನ್ನ ಶರೀರವನ್ನು ತಲೆಯಿಂದ ಪಾದಗಳವರೆಗೂ ಮುಚ್ಚಿಕೊಂಡಿದ್ದಳು. ಹೀಗೆ ವೇಷ ಬದಲಾಯಿಸಿಕೊಂಡು ಅವಳು ತನ್ನ ತಂದೆಯ ಮನೆಗೆ ಹೊರಟಳು.

ದಾರಿಯಲ್ಲಿ ಮಾಟಗಾರ ಹಿಂದಿರುಗಿ ಬರುತ್ತಿದ್ದವನು ಎದುರಿಗೆ ಸಿಕ್ಕಿದ. ಅವನನ್ನು ದೂರದಿಂದಲೇ ನೋಡಿ ಅವಳು ಒಂದು ಮರದ ಮೇಲಕ್ಕೆ ಹಕ್ಕಿಯಂತೆ ಹಾರಿ ಎಲೆಗಳ ಮಧ್ಯೆ ಹುದುಗಿಕೊಂಡಳು. ಅವನು ಅವಳನ್ನು ಗುರುತಿಸಲಾರದೆ ಮುಂದೆ ನಡೆದ. ಮನೆಯ ಎತ್ತರದ ಕಿಟಕಿಯಲ್ಲಿ ಅವಳು ಕೂಡಿಸಿದ್ದ ತಲೆ ಅವನಿಗೆ ದೂರದಿಂದಲೇ ಕಾಣಿಸಿತು. ಅವನು ಮದುವಣಗಿತ್ತಿ ತಾನು ಬರುವುದನ್ನೇ ಎದುರು ನೋಡುತ್ತಿದ್ದಾಳೆಂದು ಭಾವಿಸಿ, "ಎಂಥ ಒಳ್ಳೆಯ ಹುಡುಗಿ!" ಎಂದು ಹಿಗ್ಗಿ ವೇಗವಾಗಿ ಹೆಜ್ಜೆಹಾಕಿದ.

ಅವನು ಮನೆಯನ್ನು ಹೊಕ್ಕು ಹುಡುಕುತ್ತಾನೆ—ಅಲ್ಲಿ ಯಾರಿದ್ದಾರೆ?

ಅಷ್ಟರಲ್ಲಿ ಮೊದಲು ಊರಿಗೆ ಸೇರಿಕೊಂಡ ಹುಡುಗಿಯರು ತಮ್ಮ ತಂಗಿಯ ನೆರವಿಗೆಂದು ಕಳುಹಿಸಿ ಕೊಟ್ಟಿದ್ದ ಕೆಲವರು ಗೆಳೆಯರು ಅಲ್ಲಿಗೆ ಬಂದರು. ಅವರುಮಾಟಗಾರನನ್ನು ಹಿಡಿದು ಒಂದು ಕೋಣೆಯಲ್ಲಿ ಕೂಡಿ, ಅವನನ್ನೂ ಅವನ ಮನೆಯನ್ನೂ ಒಟ್ಟಿಗೆ ಸುಟ್ಟುಹಾಕಿದರು.



# ಶ್ರೀ ಎಂ. ರಾಮರಾಯರ ಪುಸ್ತಕಗಳು

೧. **ಚಕ್ರವರ್ತಿಯ ಕೋಗಿಲೆ** (ಹ್ಯಾನ್ಸ್ ಆಂಡರ್‌ಸನ್ನರ ಕತೆಗಳು)
೨. **ಮಂಜಿನ ಮಣಿ** (ಗ್ರಿಮ್ ಸಹೋದರರ ಕತೆಗಳು)
೩. **ಜೀವರಸ** ”
೪. **ಚಿಪ್ಪಿಗನ ಸಾಹಸ** ”
೫. **ಜಲದೇವತೆ** ”
೬. **ಸೇವಕರತ್ನ** ”
೭. **ಶಕ್ತಿಪುರುಷ** ”
೮. **ವನಮಂದಿರ** ”
೯. **ನಾಗಕನ್ನಿಕೆ** (ವಿವಿಧ ದೇಶಗಳ ಜನಪದ ಕತೆಗಳು)
೧೦. **ರಾಜಕುಮಾರನ ಕನಸು** (ಸರ್ಬಿಯಾ ದೇಶದ ಎರಡು ಕತೆಗಳು)
೧೧. **ಎರಡು ಕತೆಗಳು** (ಜನಪದ ಕತೆಗಳು)

ನಿಮ್ಮ ಮಕ್ಕಳಿಗೆ ಯೋಗ್ಯವೂ ಉಪಯುಕ್ತವೂ ಆದ ಉಡುಗೊರೆಯನ್ನು ಕೊಡಲು ಇಷ್ಟಪಡುವಿರೇನು? ಅವರ ಕಲ್ಪನಾಶಕ್ತಿ ಹದವಾಗಿ ಬೆಳೆಯಬೇಕೆಂದು ಬಯಸುವಿರೇನು? ಅವರ ವಾಚನಾಭಿರುಚಿ ನಿರಾಯಾಸವಾಗಿ, ಸ್ವಯಂಪ್ರೇರಿತವಾಗಿ ಸಮರ್ಪಕವಾಗಿ ವೃದ್ಧಿಹೊಂದಬೇಕೆಂದು ಅಪೇಕ್ಷಿಸುವಿರೇನು? ಇಡಿ ಜಗತ್ತಿನ ಸಾಹಿತ್ಯ ಮತ್ತು ಶಿಕ್ಷಣ ಕ್ಷೇತ್ರಗಳಲ್ಲಿ ಸುವಿಖ್ಯಾತವಾಗಿರುವ ಹಲವಾರು ಕತೆಗಳ ಪರಿಚಯ ಅವರಿಗೆ ಲಭಿಸಬೇಕೆಂದು ಆಶಿಸುವಿರೇನು? ಹಾಗಾದರೆ, ನಿಮ್ಮ ಮನೆಗಳಲ್ಲೂ ನಿಮ್ಮ ಶಾಲೆಗಳಲ್ಲೂ ಮೇಲ್ಕಂಡ ಪುಸ್ತಕಗಳು ಇದ್ದೇ ಇರಬೇಕು. ಮಕ್ಕಳಿಗೆ ನಕ್ಕರೆಯಂತೆ ಪ್ರಿಯವಾದ ಅದ್ಭುತ ರಮ್ಯ ಕತೆಗಳಿವು. ನಮ್ಮ ಸಮಾಜದ ರೀತಿ ನೀತಿಗಳಿಗೆ ಹೊಂದಿಕೆಯಾಗುವಂತೆ ಮಾರ್ಪಾಟಾಗಿರುವುದು ಈ ಕತೆಗಳ ವೈಶಿಷ್ಟ್ಯ. ಹನ್ನೊಂದು ಪುಸ್ತಕಗಳಲ್ಲಿ ಒಟ್ಟು ಎಪ್ಪತ್ತೇಳು ಬೇರೆ ಬೇರೆಯ ಕತೆಗಳಿವೆ.

(ಪುಟ ತಿರುಗಿಸಿ ನೋಡಿ)

# ಶ್ರೀ ಎಂ. ರಾಮರಾಯರ ಇತರ ಪುಸ್ತಕಗಳು

## ೧. ಹರ – ಪಾರ್ವತಿ

ನಲವತ್ತು ಸುಂದರ ಕವಿತೆಗಳ ಸಂಕಲನ. ಮೂವತ್ತೊಂಬತ್ತು ಭಾವ ಗೀತೆಗಳೂ ಒಂದು ಕಥನ - ಕವನವೂ ಈ ಸಂಗ್ರಹವಲ್ಲಿದೆ. ಈಚಿಗೆ ಕನ್ನಡ ದಲ್ಲಿ ಹೊರಬಿದ್ದಿರುವ ಒಳ್ಳೆಯ ಪದ್ಯ ಗ್ರಂಥಗಳಲ್ಲಿ ಇದೊಂದು.

## ೨. ವ್ಯಾಧಿಗೆ ತಕ್ಕ ವೈದ್ಯ

ಮೂರು ಅಂಕಗಳ ಸಾಮಾಜಿಕ ಪ್ರಹಸನ. ಮೋಲಿಯರನ "ದಿ ಫಿಜಿಷಿಯನ್ ಇನ್ ಸ್ಪೈಟ್ ಆಫ್ ಹಿಮ್‌ಸೆಲ್ಫ್" ಎಂಬ ಕೃತಿಯು ಆಧಾರದ ಮೇಲೆ ರಚಿತವಾದುದು. ರಂಗಭೂಮಿಯ ಮೇಲೆ ಯಶಸ್ವಿಯಾಗಿ ಪ್ರದರ್ಶಿ ಸಲ್ಪಟ್ಟು ನೋಡಿದವರೆಲ್ಲರ ಮೆಚ್ಚಿಗೆಗೂ ಪಾತ್ರವಾಗಿದೆ. ಸುಮಾರು ಒಂದೂ ವರೆ ಗಂಟೆಗಳ ಕಾಲ ಉದ್ದಕ್ಕೂ ನಗಿಸಿ ನಲಿಸುವ ಹಾಸ್ಯನಾಟಕ.

## ೩ ಇಪ್ಪತ್ತಾರು ಇಂಗ್ಲಿಷ್ ಪ್ರಬಂಧಗಳು

ಇಂಗ್ಲಿಷ್ ಸಾಹಿತ್ಯದಲ್ಲಿ ಹೆಸರಾಂತ ಐವರು ಪ್ರಬಂಧಕಾರರ ಇಪ್ಪತ್ತಾರು ಉತ್ತಮ ಪ್ರಬಂಧಗಳ ಕನ್ನಡ ಅನುವಾದಗಳು ಈ ಪುಸ್ತಕದಲ್ಲಿವೆ. ಮೊದಲಿ ನಲ್ಲೂ ಕೊನೆಯಲ್ಲೂ ಕೊಟ್ಟಿರುವ ಪ್ರಬಂಧಕಾರರ ಪರಿಚಯ ಮತ್ತು ಟಿಪ್ಪ ಟಿಪ್ಪಣಿಗಳು ಓದುವವರಿಗೆ ವಿಶೇಷ ಸಹಾಯವನ್ನು ಒದಗಿಸುತ್ತವೆ. ವಿಚಾರ ಪೂರ್ಣವೂ ಆಲೋಚನಾಪ್ರಚೋದಕವೂ ಸರ್ವಾದರಣೀಯವೂ ಆದ ಈ ಪ್ರಬಂಧಗಳ ಶ್ರೇಷ್ಠತೆಯನ್ನು ಓದಿ ಅರಿಯಬೇಕು. ಇಂಥ ಪುಸ್ತಕ ಕನ್ನಡದಲ್ಲಿ ಇನ್ನಾವುದೂ ಇಲ್ಲವೇ ಇಲ್ಲವೆನ್ನಬಹುದು.

**ಸತ್ಯಶೋಧನ ಪುಸ್ತಕ ಭಂಡಾರ,**

**ಕೋಟೆ, ಬೆಂಗಳೂರು**